KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೧, ೨೦೦೮ (ಭಾದ್ರಪದ ೨೦, ಶಕ ವರ್ಷ ೧೯೩೦) | ಸಂಚಿಕೆ ೩೭ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/ 230/ ನಿಯವಿ/ 2008, ದಿನಾಂಕ:4ನೇ ಜುಲೈ, 2008**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ (1966 ಕರ್ನಾಟಕ ಅಧಿನಿಯಮ 27) ಪ್ರಕರಣ 6ರ ಉಪಪ್ರಕರಣ (2) ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಹೆಚ್.ಆರ್. ಶ್ರೀನಿವಾಸ ಆದ ನಾನು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಹಗರಿಬೊಮ್ಮನಹಳ್ಳಿ ಇದರ ಮಾರುಕಟ್ಟೆ ಕ್ಷೇತ್ರದಲ್ಲಿ ಕರ್ನಾಟಕ ಸರ್ಕಾರವು ರಾಜ್ಯದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಈ ಕೆಳಗೆ ನಮೂದಿಸಿರುವಂತೆ ಅಧಿಸೂಚಿಸಲ್ಪಟ್ಟಿರುವ 112 ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಬಳ್ಳಾರಿ ಜಿಲ್ಲೆಯ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ "ಹನಸಿ" ಗ್ರಾಮದ ಪಂಚಾಯಿತಿ ಪರಿಮಿತಿಯೊಳಗಿನ ಪ್ರದೇಶವನ್ನು **"ಉಪ ಮಾರುಕಟ್ಟೆ"** ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು **"ಉಪ ಮಾರುಕಟ್ಟೆ ಪ್ರಾಂಗಣ"** ಎಂದು ಘೋಷಿಸಿದ್ದೇನೆ.

**ಕೃಷಿ ಉತ್ಪನ್ನಗಳು**

(1) ಜಾನುವಾರುಗಳು, (2) ಮೇಕೆಗಳು, (3) ಕುರಿಗಳು, (4) ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), (5) ಎಲ್ಲಾ ಹೂ.ಗಳು, (6) ಸಜ್ಜೆ, (7) ಜವೆ ಗೋಧಿ, (8) ಜೋಳ, (9) ಕಂಬು, (10) ಮೆಕ್ಕೆಜೋಳ, (11) ನವಣೆ, (12) ಭತ್ತ, (13) ರಾಗಿ, (14) ಅಕ್ಕಿ, (15) ಸಾಮೆ (ಸಾವೆ), (16) ಗೋಧಿ, (17) ಅಂಟುವಾಳ, (18) ಬೊಂಬು, (19) ಬೆತ್ತ, (20) ಹಿಪ್ಪೆಬೀಜ, (21) ಹೊಂಗೇಬೀಜ, (22) ಬೇವಿನಬೀಜ, (23) ಸೀಗೇಕಾಯಿ, (24) ಹುಣಸೇಹಣ್ಣು, (25) ಹುಣಸೇಬೀಜ, (26) ಸೇಬು, (27) ಬಾಳೆಹಣ್ಣು, (28) ಬೋರೆಹಣ್ಣು, (29) ಹುಳಿಹಣ್ಣುಗಳು, (30) ಚಕ್ಕೋತನಹಣ್ಣು, (31) ಪೇರಲೆಹಣ್ಣು (ಸೀಬೆಹಣ್ಣು), (32) ದ್ರಾಕ್ಷಿ, (33) ಹಲಸಿನಹಣ್ಣು, (34) ಜಂಬುನೇರಳೆ ಹಣ್ಣು, (35) ನಿಂಬೆಹಣ್ಣು, (36) ಕರಬೂಜ, (37) ಮಾವಿನಹಣ್ಣು, (38) ಮೂಸಂಬಿ, (39) ಮರಸೇಬು, (40) ಪೈನಾಪಲ್ (ಅನಾನಸ್), (41) ಪಪ್ಪಾಯಿಹಣ್ಣು (ಪರಂಗಿಹಣ್ಣು), (42) ದಾಳಿಂಬೆಹಣ್ಣು, (43) ಸಪೋಟಾ, (44) ಸಿದ್ದೋಟ, (45) ಕಿತ್ತಾಳೆ, (46) ಕಲ್ಲಂಗಡಿ, (47) ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ), (48) ಹರಳುಬೀಜ, (49) ಹತ್ತಿಬೀಜ, (50) ಅಗಸೆಬೀಜ, (51) ಸಾಸುವೆ, (52) ಹುಚ್ಚೆಳ್ಳು, (53) ಕುಸುಬೆ, (54) ಎಳ್ಳು, (55) ಸೂರ್ಯಕಾಂತಿಬೀಜ, (56) ಸೋಯಾಬಿನ್, (57) ಅಡಿಕೆ, (58) ಗೋಡಂಬಿಬೀಜ, (59) ಒಣಮೆಣಸಿನಕಾಯಿ, (60) ತೆಂಗಿನಕಾಯಿ, (61) ಕೊಬ್ಬರಿ, (62) ಕೊತ್ತಂಬರಿಬೀಜ (ಧನಿಯಾ), (63) ಬೆಳ್ಳುಳ್ಳಿ, (64) ಶುಂಠಿ, (65) ಮೆಂತ್ಯ, (66) ಕಾಳುಮೆಣಸು, (67) ಅರಿಶಿನ, (68) ಅಲಸಂದೆ (ಇಡೀ ಮತ್ತು ಒಡೆದ), (69) ಅವರೆ (ಇಡೀ ಮತ್ತು ಒಡೆದ), (70) ಕಡಲೆ (ಇಡೀ ಮತ್ತು ಒಡೆದ), (71) ಉದ್ದು (ಇಡೀ ಮತ್ತು ಒಡೆದ), (72) ಬುಲ್ಲರ್ (ಇಡೀ ಮತ್ತು

ಒಡೆದ), (73) ಹೆಸರು (ಇಡೀ ಮತ್ತು ಒಡೆದ), (74) ಹುರುಳಿ, (75) ಲಾಕ್ (ಇಡೀ ಮತ್ತು ಒಡೆದ), (76) ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), (77) ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), (78) ಬಟಾಣಿ, (79) ತೊಗರಿ (ಇಡೀ ಮತ್ತು ಒಡೆದ), (80) ಮೋತ್ (ಇಡೀ ಮತ್ತು ಒಡೆದ), (81) ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ) (ಗರ್ಕಿನ್ ಹೊರತುಪಡಿಸಿ), (82) ಕಾಯಿಗಳು, (83) ಹಸಿರುಮೆಣಸಿನಕಾಯಿ, (84) ಈರುಳ್ಳಿ, (85) ಆಲೂಗಡ್ಡೆ, (86) ಸುವರ್ಣಗೆಡ್ಡೆ, (87) ಸಿಹಿಗೆಣಸು (ಗೆಣಸು), (88) ಟೊಮ್ಯಾಟೋ, (89) ಬೀಟೆ (ರೋಸ್‌ವುಡ್), (90) ಬಿಲ್ವಾಲ, (91) ಗಂಜಾನ್, (92), ಹಡಗ, (93) ಹಳದಿ, (94) ಹನಿಮತ್ತಲ್, (95) ಹೊನ್ನೆ, (96) ಐಯಾನಿ, (97) ಹಲಸಿನಮರ, (98) ಜಂಬೆ, (99) ಕಲನ್, (100) ಕಿಂಡಲ್, (101) ಮಾವಿನಮರ, (102) ಮತ್ತಿ, (103) ನಂದಿ, (104) ರಾಂಪತ್ರೆ, (105) ತೇಗ (ಸಾಗುವಾನಿ), (106) ಬಿಳಿ ದೇವದಾರು (ಕೇದರ), (107) ಸಿಲ್ವರ್ ಓಕ್, (108) ನೀಲಗಿರಿ, (109) ವೀಳ್ಯೆದೆಲೆ, (110) ಬೆಲ್ಲ, (111) ತೆಂಗಿನಕಡ್ಡಿ, (112) ಒಣದ್ರಾಕ್ಷಿ.

**ಅನುಸೂಚಿ**

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ **"ಹನಸಿ"** ಗ್ರಾಮದ ಪರಿಮಿತಿಯೊಳಗೆ ವ್ಯಾಪಾರ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:

ಉತ್ತರಕ್ಕೆ: ಹಗರಿಬೊಮ್ಮನಹಳ್ಳಿಯಿಂದ ಗ್ರಾಮದೊಳಗಿನ ರಸ್ತೆ ಹೊಂದಿಕೊಂಡಿರುತ್ತದೆ.

ದಕ್ಷಿಣಕ್ಕೆ: ಗ್ರಾಮದಲ್ಲಿಯ ಕೂಡ್ಲಿಗಿಗೆ ಹೋಗುವ ರಸ್ತೆ ಮತ್ತು ವಾಸದ ಮನೆಗಳು.

ಪೂರ್ವಕ್ಕೆ: ಕೆರೆಗೆ ಹೊಂದಿಕೊಂಡು ಗ್ರಾಮದೊಳಗೆ ರಸ್ತೆಗೆ ಹೊಂದಿಕೊಂಡ ಬದಿಗಳು.

ಪಶ್ಚಿಮಕ್ಕೆ: ಕಣವಿನಾಯಕನಹಳ್ಳಿಗೆ ಹೋಗುವ ರಸ್ತೆ ಮತ್ತು ವಾಸದ ಮನೆಗಳು.

**ಹೆಚ್.ಆರ್. ಶ್ರೀನಿವಾಸ್**

ಪಿ.ಆರ್.1012 ನಿರ್ದೇಶಕರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಸಂಖ್ಯೆ: ಎ1. 71ಎ. ಅಮೊ.64/05–06, ದಿನಾಂಕ:8ನೇ ಜನವರಿ, 2008**

**ಉಪಸ್ಥಿತರು:** ಶ್ರೀ ಜಿ.ಎಸ್. ಯಾದವ್, ಭಾಅಸೇ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲಾ

**ಪ್ರಸ್ತಾವನೆ:**

ದಿನಾಂಕ:30.03.2006 ರಂದು ಒಂದು ಯಮಹಾ ಮೋಟಾರ್ ಸೈಕಲ್ ವಾಹನ ನೊಂದಣಿ ಸಂಖ್ಯೆ: ಕೆಎ–14.ಎಲ್.2172 ರಲ್ಲಿ ಒಟ್ಟು 7 ಕೆಜಿ 800 ಗ್ರಾಂ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ಸಾಗಿಸುತ್ತಿದ್ದನ್ನು, ಶಿವಮೊಗ್ಗ ಅರಣ್ಯ ಸಂಚಾರಿ ದಳದ ವನಪಾಲಕರು ಹಾಗೂ ಸಿಬ್ಬಂದಿಯವರು ವರ್ತಮಾನದ ಮೇರೆಗೆ ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮವನ್ನು ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ: 64/05–06 ನ್ನು ದಾಖಲು ಮಾಡಿಕೊಂಡು ವಾಹನ ಸಂಖ್ಯೆ: ಕೆಎ.14.ಎಲ್2172 ರ ಇಂಜಿನ್ ಸಂಖ್ಯೆ: 145281122, ಚಾಸ್ಸಿ ಸಂಖ್ಯೆ: 994145/ 281122 ಆಗಿದ್ದು, ಹಾಗೂ ಈ ಪ್ರಕರಣಕ್ಕೆ ಸಂಬಂಧಪಟ್ಟ ಒಬ್ಬ ಆಸಾಮಿಯು ಸಿಕ್ಕಿದ್ದು, ಈತನನ್ನು ದಸ್ತಗಿರಿ ಮಾಡಿ ನ್ಯಾಯಾಂಗ ವಶಕ್ಕೆ ಕೊಟ್ಟಿರುವುದಾಗಿ ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಯೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು ಈ ಪ್ರಾಧಿಕಾರಕ್ಕೆ ಹಾಜರು ಪಡಿಸಿರುತ್ತಾರೆ.

ಈ ಪ್ರಸ್ತಾವನೆಯಂತೆ ವಾಹನ ಮತ್ತು ಅಮಾನತ್ತುಪಡಿಸಿದ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು. ಮುಂದುವರಿದು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು/ ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ ಮೂಲ ದಾಖಲಾತಿಯೊಂದಿಗೆ ಹಕ್ಕು ಬಾದ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತು ಪಡಿಸುವುದು, ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ:06.05.2006ರ ಸಹ್ಯಾದ್ರಿ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ 11 ಮೇ 2006ರ ಕರ್ನಾಟಕ ರಾಜ್ಯ ಪತ್ರದ ಭಾಗ–3ರ ಪುಟಸಂಖ್ಯೆ–1245 ರಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿತ್ತು.

ಈ ಮಧ್ಯೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ರವರಲ್ಲಿ ಪತ್ರವ್ಯವಹರಿಸಿ ವಾಹನದ ಬಿ ವರದಿಯನ್ನು ಪಡೆದು ಪರಿಶೀಲಿಸಿದಾಗ ಸದರಿ ವಾಹನವು ಶ್ರೀ ಇಮ್ತಿಯಾಜ್ ಬಿನ್ ಶೇಕ್ ಇಬ್ರಾಹಿಂ, ಲಷ್ಕರ ಮೊಹಲ್ಲಾ, ಶಿವಮೊಗ್ಗ ಇವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿದು ಬಂದಿದೆ. ಈ ಪ್ರಕಾರ ದಿನಾಂಕ:11.10.2006 ಮತ್ತು 30.10.2006 ರಂದು ಕಾರಣ ಕೇಳುವ ಪತ್ರವನ್ನು ರಿಜಿಸ್ಟರ್ ಅಂಚೆ ಮುಖಾಂತರ ಆ ಸಾಮಿಗೆ ಜಾರಿ ಮಾಡಿದಾಗ ಅದು ಜಾರಿಯಾಗದೇ ಈ ವಿಳಾಸದವರು ಯಾರು ಇರುವುದಿಲ್ಲವೆಂದು ಅಂಚೆ ಷರಾದೊಂದಿಗೆ ಪತ್ರ ದಿನಾಂಕ:08.11.2006 ರಂದು ವಾಪಸ್ಸು ಬಂದಿರುತ್ತದೆ.

ಮುಂದುವರಿದು ಹಾಲಿ ವಾಹನದ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದಲೂ ಮತ್ತು ಪ್ರಕಟಣೆಯಂತೆ 30 ದಿವಸಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳುವುದಾಗಿ ಪ್ರಕಟಣೆಯಲ್ಲಿ ನೀಡಲಾಗಿತ್ತು. ಈ ಪ್ರಕಾರ ನಿಗದಿತ ಕಾಲಾವಕಾಶ ಈಗಾಗಲೇ ಮುಗಿದಿದ್ದು ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನ ಬಿಡುಗಡೆ ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅರ್ಜಿಯನ್ನು ಸಲ್ಲಿಸಿಲ್ಲದ ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ವಾಹನ ಮಾಲೀಕರನ್ನು ಪತ್ತೆಹಚ್ಚಲು ಎಲ್ಲಾ ರೀತಿಯ ಕ್ರಮ ಕೈಗೊಂಡಾಗ್ಯೂ ಸಾಧ್ಯವಾಗದೇ ಇದ್ದರಿಂದ ಬಹಳ ದಿನಗಳ ಕಾಲ ವಿಲೇವಾರಿ ಮಾಡದೇ ಬಿಟ್ಟಲ್ಲಿ ವಾತಾವರಣದ ವೈಪರೀತ್ಯಾದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಸರ್ಕಾರಕ್ಕೆ ನಷ್ಟ ಸಂಭವಿಸುವುದರಿಂದ ಮತ್ತು ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಭೀತು ಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಈವರೆವಿಗೂ ಬಾರದೇ ಇದ್ದುದರಿಂದ ಇನ್ನು ಮುಂದೆಯೂ ಸಹ ಬರುವ ಸಾಧ್ಯತೆ ಇಲ್ಲದಿರುವ ಕಾರಣ ಹಾಗೂ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಹಾಗೂ ಸ್ವತಃ ತಾನೇ ಈ ಕಾನೂನು ಬಾಹಿರ ಕೃತ್ಯವನ್ನು ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಆದ್ದರಿಂದ ದಿನಾಂಕ:30.03.2006 ರಂದು ಈ ಮೇಲೆ ತಿಳಿಸಿದ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದುದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಶಪಡಿಸಿಕೊಂಡು ಮೊಕದ್ದಮೆಯನ್ನು ದಾಖಲು ಮಾಡಿ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಈವರೆವಿಗೂ ಯಾರು ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶವನ್ನು ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ದಿನಾಂಕ:30.03.2006ರಂದು ಯಮಹಾ ಮೋಟಾರ್ ಸೈಕಲ್ ನೊಂದಣಿ ಸಂಖ್ಯೆ: ಕೆಎ.14.ಎಲ್.2172 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಇದ್ದ ದಾಖಲೆಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡುಬಂದಿರುವುದರಿಂದ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಜಿ.ಎಸ್. ಯಾದವ್, ಭಾಅಸೇ, ಅಧಿಕೃತ ಅಧಿಕಾರಿ ಹಾಗೂ ಉಪಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71–ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಯಮಹಾ ಮೋಟಾರ್ ಸೈಕಲ್ ಸಂಖ್ಯೆ: ಕೆಎ.14.ಎಲ್.2172 ಇಂಜಿನ್ ಸಂಖ್ಯೆ:145281122 ಚಾಸ್ಸಿ ಸಂಖ್ಯೆ:994145/281122 ಮತ್ತು 7 ಕೆ.ಜಿ.800 ಗ್ರಾಂ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಮುಟ್ಟುಗೋಲು ಹಾಕಿಕೊಂಡ 7 ಕೆಜಿ 800 ಗ್ರಾಂ ಶ್ರೀಗಂಧವನ್ನು ಈ ಪ್ರಕರಣದಲ್ಲಿ ಆಪಾದಿತರ ಮೇಲೆ ನಡೆಯುತ್ತಿರುವ ಕ್ರಿಮಿನಲ್ ಕೇಸ್ ಮುಕ್ತಾಯವಾಗುವವರೆವಿಗೂ ಕಾಯ್ದುಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:08.01.2008 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ:08.01.2008 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿ ಪ್ರತಿಯನ್ನು ತಿದ್ದಿ ನ್ಯಾಯಾಲಯದಲ್ಲಿ ಘೋಷಿಸಿ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎಸ್. ಯಾದವ್, ಭಾಅಸೇ,**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗವೃತ್ತ,
ಶಿವಮೊಗ್ಗ.

ಪಿ.ಆರ್.101

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 3-(A) (2) OF THE KARNATAKA SALES TAX ACT, 1957**

**Sub:** KST Act, 1957-Clarification under Section 3-A(2) regarding the rate of tax applicable on 'sugar cane' purchased from unregistered dealers and used in the manufacture of sugar cane juice.

**Ref:** Application Dated:14.02.2008 of M/s Cane-o-la Foods Private Limited, No.70, 21st 'A' Main Road, II Phase, Marenahalli, J.P. Nagar, Bangalore-560 078.

In its application Dated:14.02.2008 cited above, M/s Cane-o-la Foods Private Limited, No.70, 21st 'A' Main Road, II Phase, Marenahalli, J.P. Nagar, Bangalore-560 078, has sought clarification regarding the rate of tax applicable on 'sugar cane' purchased from unregistered dealers and used in the manufacture of sugar cane juice under the Karnataka Sales Tax Act, 1957.

2. Section 3-A(2) of the Karnataka Sales Tax Act, 1957 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.256-A/07-08, Dated:3rd April, 2008**

It is hereby clarified that 'sugar cane' purchased from persons who are not registered dealers and used in the manufacture of sugar cane juice is liable to tax at 12% under Section 6 read with Section 5(1) of the KST Act, 1957. Further, additional tax at 1% under Section 6-C on such taxable purchase turnover and cess at 15% under Section 6-D & 6-E on the tax payable under Section-6, are also applicable.

**B.A. HARISH GOWDA**

PR-522

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding rate of tax applicable on "sugar cane juice"

**Ref:** Application Dated:14.02.2008 of M/s Cane-o-la Foods Private Limited, No.70, 21st 'A' Main Road, II Phase, Marenahalli, J.P. Nagar, Bangalore-560 078.

In its application Dated:14.02.2008 cited above, M/s Cane-o-la Foods Private Limited, No.70, 21st 'A' Main Road, II Phase, Marenahalli, J.P. Nagar, Bangalore-560 078, has sought clarification regarding rate of tax applicable on "sugar cane juice".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of

the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.256/07-08, Dated:29th March, 2008**

It is hereby clarified that "sugar cane juice" is taxable at 12.5% under Section 4(1)(b) of the KVAT Act, 2003.

**B.A. HARISH GOWDA**

PR-523 Commissioner of Commercial Taxes,

(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on certain instant food mixes and masalas powder of various kinds.

**Ref:** Application Dated:19.03.2008 of M/s MTR Foods Limited, No.4, 17th Cross, K.R.Road, BSK II Stage, Bangalore-560 070.

In its application Dated:19.03.2008 cited above, M/s MTR Foods Limited, No.4, 17th Cross, K.R.Road, BSK II Stage, Bangalore-560 070. has sought clarification regarding the rate of tax applicable on "Sambar powder', 'Rasam Powder', 'Vanghibhath powder', 'Channa masala', 'Pav bhaji masala', 'Bisibele bhath masala', 'Puliogare powder', 'Garam masala' and 'Pulao masala'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.364/07-08, Dated:9th April, 2008**

It is hereby clarified that 'Sambar powder', 'Rasam powder', 'Vanghibhath powder', 'Channa masala', 'Pav bhaji masala', 'Bisibele bhath masala', 'Puliogare powder', 'Garam masala' and 'Pulao masala' are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

PR-524 Commissioner of Commercial Taxes,

(Karnataka), Bangalore.

**ಜಿಲ್ಲಾ ಅಧಿಕಾರಿ ಹಾಗೂ ಶಿಸ್ತು ಪ್ರಾಧಿಕಾರಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಇವರ ನಡವಳಿಗಳು**

**ವಿಷಯ:** ಶ್ರೀ ಚಂದ್ರಹಾಸ ಶೆಟ್ಟಿ, ರಾತ್ರಿ ಕಾವಲುಗಾರರು, ಹಿಂದುಳಿದ ವರ್ಗಗಳ ಇಲಾಖಾ ಹೊಲಿಗೆ ತರಬೇತಿ ಕೇಂದ್ರ ನಿಯೋಜನೆ ಮೇರೆಗೆ ಜವಾನ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರನ್ನು ಸೇವೆಯಿಂದ ವಜಾ ಮಾಡುವ ಕುರಿತು ಆದೇಶ.

**ಉಲ್ಲೇಖ:** 1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರ ಕಛೇರಿ ತಿಳುವಳಿಕೆ ಪತ್ರ ಸಂಖ್ಯೆ: ದಕಜಿಪ/ ಆಡಳಿತ/ ಶಿಸ್ತು/ ಸಿಆರ್–115/04–05(ಎ1), ದಿನಾಂಕ:19.01.2006 ಮತ್ತು ಸಂಖ್ಯೆ:ದಕಜಿಪ/ ಆಡಳಿತ/ ಶಿಸ್ತು/ ಸಿಆರ್–1/06–07(ಎ6), ದಿನಾಂಕ:30.03.2007.

2) ಉಪಕಾರ್ಯದರ್ಶಿಗಳು, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರ ನಡವಳಿ ಸಂಖ್ಯೆ:ದಕಜಿಪ/ ಆಡಳಿತ/ ಶಿಸ್ತು/ ಸಿಆರ್/06–07(ಎ6), ದಿನಾಂಕ:03.08.2006.
3) ವಿಚಾರಣಾಧಿಕಾರಿ ಹಾಗೂ ಯೋಜನ ನಿರ್ಣಾಯಕ ಮತ್ತು ಮೌಲ್ಯ ಮಾಪನ ಅಧಿಕಾರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರ ವಿಚಾರಣಾ ವರದಿ ಸಂಖ್ಯೆ:ದಕಜಿಪ/ ಯೋಅಮೌಅ/ವಿವ–1/06–07, ದಿನಾಂಕ:04.12.2006.
4) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರ ನಡವಳಿ ಸಂಖ್ಯೆ:ದಕಜಿಪ/ ಆಡಳಿತ/ ಶಿಸ್ತು/ ಸಿಆರ್–1/06–07(ಎ6), ದಿನಾಂಕ:22.12.2006.
5) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರ ಕಛೇರಿ ತಿಳುವಳಿಕೆ ಪತ್ರ ಸಂಖ್ಯೆ:ದಕಜಿಪ/ ಆಡಳಿತ/ ಶಿಸ್ತು/ ಸಿಆರ್–1/06–07(ಎ6), ದಿನಾಂಕ:30.03.2007.
6) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರ ನಡವಳಿ ಸಂಖ್ಯೆ:ದಕಜಿಪ/ ಆಡಳಿತ/ ಶಿಸ್ತು/ ಸಿಆರ್–3/07–08(ಎ6), ದಿನಾಂಕ:02.05.2007.
7) ವಿಚಾರಣಾಧಿಕಾರಿ ಹಾಗೂ ಯೋಜನ ಅಂದಾಜು ಮತ್ತು ಮೌಲ್ಯ ಮಾಪನಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಮಂಗಳೂರು, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು, ಇವರ ವಿಚಾರಣಾ ವರದಿ ಸಂಖ್ಯೆ:ದಕಜಿಪಂ/ ಯೋ–ಮಾಸಂ–ವಿವ–1/07–08, ದಿನಾಂಕ:18.06.2007.
8) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರ ಕಛೇರಿ ಸೂಚನಾ ಪತ್ರಸಂಖ್ಯೆ: ದಕಜಿಪ/ ಆಡಳಿತ/ ಶಿಸ್ತು/ ಸಿಆರ್–1/06–07(ಎ6), ದಿನಾಂಕ:29.06.2007.

**ಪ್ರಸ್ತಾವನೆ:**

ಶ್ರೀ ಚಂದ್ರಹಾಸ ಶೆಟ್ಟಿ, ರಾತ್ರಿ ಕಾವಲುಗಾರರು, ಹಿಂದುಳಿದ ವರ್ಗಗಳ ಇಲಾಖಾ ಹೊಲಿಗೆ ತರಬೇತಿ ಕೇಂದ್ರ ನಿಯೋಜನೆ ಮೇರೆಗೆ ಜವಾನ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರು ದಿನಾಂಕ:01.03.2004 ರಿಂದ 17.04.2004 ರವರೆಗೆ, ದಿನಾಂಕ:01.10.2004 ರಿಂದ 10.10.2004 ರವರೆಗೆ, ದಿನಾಂಕ:05.11.2004 ರಿಂದ 17.01.2005 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವ ಹಿನ್ನೆಲೆಯಲ್ಲಿ ಇವರ ಅನಧಿಕೃತ ಗೈರು ಹಾಜರಿಯ ಆರೋಪದ ಮೇಲೆ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮಾವಳಿಯನ್ವಯ ಶಿಸ್ತುಕ್ರಮ ಕೈಗೊಳ್ಳುವ ಸಲುವಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರು ಉಲ್ಲೇಖ (1)ರ ನೋಟೀಸಿನಲ್ಲಿ ದೋಷಾರೋಪಣ ಪಟ್ಟಿಯನ್ನು ಆಪಾದಿತ ನೌಕರರಿಗೆ ನಿಯಮಾನುಸಾರ ಜಾರಿಗೊಳಿಸಿದ್ದು, ಆಪಾದಿತ ನೌಕರರು ತಿಳುವಳಿಕೆ ಪತ್ರ ಸ್ವೀಕರಿಸಿದ 15 ದಿನಗಳ ಒಳಗಾಗಿ ಲಿಖಿತ ಹೇಳಿಕೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಆದರೆ, ಆಪಾದಿತ ನೌಕರರು ಈ ತಿಳುವಳಿಕೆ ಪತ್ರಕ್ಕೆ ಸಮಜಾಯಿಷಿಕೆಯನ್ನು ನೀಡದೇ ಇದ್ದ ಕಾರಣ, ಆಪಾದನೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ, ಪ್ರಕರಣದ ವಿಚಾರಣೆಯನ್ನು ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಸೂಚಿಸಿ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(2)ರನ್ವಯ, ಯೋಜನ ಅಂದಾಜು ಮತ್ತು ಮೌಲ್ಯ ಮಾಪನಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಶ್ರೀಮತಿ ಕುಶಲ, ತನಿಖಾ ಸಹಾಯಕರು, ಜಿಲ್ಲಾ ಸಮಾಜ ಕಲ್ಯಾಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿಯೂ, ಉಲ್ಲೇಖ (2)ರ ನಡವಳಿಯಲ್ಲಿ ನೇಮಕ ಮಾಡಲಾಗಿದ್ದು, ವಿಚಾರಣಾಧಿಕಾರಿಯವರು ಕೂಲಂಕುಷವಾಗಿ ವಿಚಾರಣೆ ನಡೆಸಿ ಆಪಾದನೆಗಳು ರುಜುವಾತಾಗಿರುತ್ತದೆ ಎಂಬ ಫಲಿತಾಂಶದೊಂದಿಗೆ ಉಲ್ಲೇಖ (3)ರಲ್ಲಿ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಆಪಾದಿತ ನೌಕರರಿಗೆ ಉಲ್ಲೇಖ (4)ರಲ್ಲಿ ನಿಯಮಾನುಸಾರ ಜಾರಿ ಮಾಡಲಾಗಿದ್ದು, ಆಪಾದಿತ ನೌಕರರು ನೀಡಿರುವ ಸಮಜಾಯಿಷಿಕೆಯು ಸ್ವೀಕಾರಾರ್ಹವಲ್ಲವೆಂದು ಅಭಿಪ್ರಾಯ ಪಡಲಾಗಿದೆ.

ತದನಂತರ, ಎರಡನೇ ಪ್ರಕರಣದಲ್ಲಿ, ಶ್ರೀ ಚಂದ್ರಹಾಸ ಶೆಟ್ಟಿ, ರಾತ್ರಿ ಕಾವಲುಗಾರರು, ಹಿಂದುಳಿದ ವರ್ಗಗಳ ಇಲಾಖಾ ಹೊಲಿಗೆ ತರಬೇತಿ ಕೇಂದ್ರ ನಿಯೋಜನೆ ಮೇರೆಗೆ ಜವಾನ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು ಇವರು ದಿನಾಂಕ:05.05.2005 ರಿಂದ 18.08.2005 ರವರೆಗೆ ಮತ್ತು ದಿನಾಂಕ:16.02.2006 ರಿಂದ 24.09.2006 ರವರೆಗೆ ಅನಧಿಕೃತವಾಗಿ ಗೈರುಹಾಜರಾಗಿರುವ ಹಿನ್ನೆಲೆಯಲ್ಲಿ, ಇವರ ಅನಧಿಕೃತ ಗೈರು ಹಾಜರಿಯ ಆರೋಪದ ಮೇಲೆ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮದನ್ವಯ ಶಿಸ್ತುಕ್ರಮ ಕೈಗೊಳ್ಳಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರು

ಉಲ್ಲೇಖ(5)ರ ನೋಟಿಸಿನಲ್ಲಿ ದೋಷಾರೋಪಣ ಪಟ್ಟಿಯನ್ನು ಆಪಾದಿತ ನೌಕರರಿಗೆ ನಿಯಮಾನುಸಾರ ಜಾರಿಗೊಳಿಸಿದ್ದು, ಆಪಾದಿತ ನೌಕರರು ತಿಳುವಳಿಕೆ ಪತ್ರ ಸ್ವೀಕರಿಸಿದ 15 ದಿನಗಳ ಒಳಗಾಗಿ ಲಿಖಿತ ಹೇಳಿಕೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಆದರೆ, ಆಪಾದಿತ ನೌಕರರು ಈ ತಿಳುವಳಿಕೆ ಪತ್ರಕ್ಕೆ ಸಮಜಾಯಿಷಿಕೆಯನ್ನು ನೀಡದೇ ಇದ್ದ ಕಾರಣ, ಆಪಾದನೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ, ಪ್ರಕರಣದ ವಿಚಾರಣೆಯನ್ನು ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಸೂಚಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(2)ರನ್ವಯ ಮಾನವ ಸಂಪನ್ಮೂಲ ಮತ್ತು ಸಾಲ ಯೋಜನಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು- ಇವರನ್ನು ಉಲ್ಲೇಖ (6)ರಲ್ಲಿ, ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದು, ವಿಚಾರಣಾಧಿಕಾರಿಯವರು ಕೂಲಂಕುಷವಾಗಿ ಪ್ರಕರಣದ ವಿಚಾರಣೆಯನ್ನು ನಡೆಸಿ ಆಪಾದನೆಗಳು ರುಜುವಾತಾಗಿರುತ್ತದೆ ಎಂಬ ಫಲಿತಾಂಶದೊಂದಿಗೆ ಉಲ್ಲೇಖ (7)ರಲ್ಲಿ ವರದಿಯನ್ನು ಸಲ್ಲಿಸಿರುತ್ತಾರೆ.

ವಿಚಾರಣಾ ವರದಿಯ ಕುರಿತು ಅಂತಿಮ ನಿರ್ಣಯ ತೆಗೆದುಕೊಳ್ಳುವ ಮುನ್ನ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(ಎ) ರನ್ವಯ ಆಪಾದಿತ ನೌಕರರಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಈ ಮೇಲಿನ ಉಲ್ಲೇಖ (8)ರಲ್ಲಿ ಲಗ್ತೀಕರಿಸಿ ನೋಂದಾಯಿತ ಅಂಚೆ ಮೂಲಕ ಜಾರಿಗೊಳಿಸಲಾಗಿದ್ದು, ಆಪಾದಿತ ನೌಕರರು ಸದರಿ ಟಪಾಲನ್ನು ಸ್ವೀಕರಿಸದೇ ವಾಪಾಸು ಬಂದಿರುವ ಹಿನ್ನೆಲೆಯಲ್ಲಿ, ಸದರಿ ವರದಿಯ ಪ್ರತಿಯನ್ನು ದಿನಾಂಕ:28.07.2007ರಂದು ಆಪಾದಿತ ನೌಕರರ ವಾಸ್ತವ್ಯದ ಮನೆಯ ಗೋಡೆಗೆ ಅಂಟಿಸಿ ನಿಯಮಾನುಸಾರ ಜಾರಿ ಮಾಡಲಾಗಿ ಆಪಾದಿತ ನೌಕರರು ವಿಚಾರಣಾ ವರದಿಯನ್ನು ಅಂಗೀಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ ನೌಕರರು ಲಿಖಿತ ಸಮಜಾಯಿಷಿಕೆಯನ್ನು ನೀಡಿರುವುದಿಲ್ಲ.

ಈ ಮೇಲಿನ ಎರಡೂ ಪ್ರಕರಣಗಳಿಗೆ ಸಂಬಂಧಿಸಿದಂತೆ, ಏಕಕಾಲದಲ್ಲಿ ಸಲ್ಲಿಸಲಾಗಿರುವ ಪ್ರತ್ಯೇಕ ಪ್ರತ್ಯೇಕವಾದ ವಿಚಾರಣಾ ವರದಿಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11(7) ರಿಂದ 11(23)ರಲ್ಲಿ ನಿರೂಪಿಸಿರುವ ವಿಧಿ ವಿಧಾನಗಳನ್ವಯ ಕೂಲಂಕುಷವಾಗಿ ಪರಿಶೀಲಿಸಲಾಗಿ, ಈ ಕೆಳಕಂಡ ಅಂಶಗಳು ಶಿಸ್ತು ಪ್ರಾಧಿಕಾರಿಯ ಗಮನಕ್ಕೆ ಬಂದಿರುತ್ತದೆ.

ಮೊದಲನೇ ಪ್ರಕರಣದಲ್ಲಿ ಆರೋಪಿಸಲಾದಂತೆ, ಆಪಾದಿತ ನೌಕರರು ದಿನಾಂಕ:01.03.2004 ರಿಂದ 17.04.2004 ರವರೆಗೆ, ದಿನಾಂಕ:01.10.2004 ರಿಂದ 10.10.2004 ರವರೆಗೆ, ದಿನಾಂಕ:05.11.2004 ರಿಂದ 17.01.2005 ರವರೆಗೆ ಹಾಗೂ ಎರಡನೇ ಪ್ರಕರಣದಲ್ಲಿ ಆರೋಪಿಸಲಾದಂತೆ ದಿನಾಂಕ:05.05.2005 ರಿಂದ 18.08.2005 ರವರೆಗೆ ಮತ್ತು ದಿನಾಂಕ:16.02.2006 ರಿಂದ 24.09.2006 ರವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ರುಜುವಾತಾಗಿರುತ್ತದೆ.

ಈ ಮೇಲಿನ ಅಂಶಗಳನ್ನು ಗಮನಿಸಲಾಗಿ, ಆಪಾದಿತ ನೌಕರರು ದಿನಾಂಕ:01.03.2004 ರಿಂದ 17.04.2004 ರವರೆಗೆ 48 ದಿನಗಳು, ದಿನಾಂಕ:01.10.2004 ರಿಂದ 10.10.2004 ರವರೆಗೆ 10 ದಿನಗಳು, ದಿನಾಂಕ:05.11.2004 ರಿಂದ 17.01.2005 ರವರೆಗೆ 74 ದಿನಗಳು ಹೀಗೆ ಪದೇ ಪದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ಇವರು ಕರ್ತವ್ಯದಲ್ಲಿ ಅನಾಸಕ್ತರಾಗಿರುವುದನ್ನು ತೋರ್ಪಡಿಸುತ್ತದೆ. ಮುಂದುವರಿದು, ಇವರು ದಿನಾಂಕ:05.05.2005 ರಿಂದ 18.08.2005 ರವರೆಗೆ 106 ದಿನಗಳು ಮತ್ತು ದಿನಾಂಕ:16.02.2006 ರಿಂದ 24.09.2006 ರವರೆಗೆ 221 ದಿನಗಳು ಅಂದರೆ ನಾಲ್ಕು ತಿಂಗಳಿಗೂ ಮೀರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ತೀವ್ರತರವಾದ ದುರ್ನಡತೆಯಾಗಿರುತ್ತದೆ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 108ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಬಹುದಾದ ಅಥವಾ ತೆಗೆದು ಹಾಕಬಹುದಾದ ಪ್ರಕರಣವಾಗಿರುತ್ತದೆ.

ಆದ್ದರಿಂದ, ಈ ಪ್ರಕರಣದಲ್ಲಿ, ಶ್ರೀ ಚಂದ್ರಹಾಸ ಶೆಟ್ಟಿ, ರಾತ್ರಿ ಕಾವಲುಗಾರರು, ಹಿಂದುಳಿದ ವರ್ಗಗಳ ಇಲಾಖಾ ಹೊಲಿಗೆ ತರಬೇತಿ ಕೇಂದ್ರ ನಿಯೋಜನೆ ಮೇರೆಗೆ ಜವಾನ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು-ಇವರು ದಿನಾಂಕ:16.02.2006 ರಿಂದ 24.09.2006 ರವರೆಗೆ 221 ದಿನಗಳು ಅಂದರೆ ನಾಲ್ಕು ತಿಂಗಳಿಗೂ ಹೆಚ್ಚಿನ ಅವಧಿಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಆಪಾದಿತ ನೌಕರರ ಈ ಮೇಲಿನ ಅನಧಿಕೃತ ಗೈರು ಹಾಜರಾತಿ ಹಾಗೂ ದುರ್ನಡತೆ ಆರೋಪ ಸಾಬೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(viii)ರ ಕಠಿಣ ದಂಡನೆಯನ್ನು ವಿಧಿಸಲು ನಿರ್ಧರಿಸಿದ್ದು, ಪ್ರಯುಕ್ತ ಈ ಕೆಳಕಂಡ ಆದೇಶ:

**ಆದೇಶ**

**ಸಂಖ್ಯೆ: ಬಿಸಿಎಂ/ವಿನಿ/ಸಿಬ್ಬಂದಿ/ ಸಿಆರ್-133/ 03-04, ದಿನಾಂಕ:7ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11 ಮತ್ತು ನಿಯಮ 11(ಎ) ನ್ನು ಓದಿಕೊಂಡಂತೆ, ಅದೇ ನಿಯಮಗಳ ನಿಯಮ 9(I) (3) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎಸ್. ಕಾಳೆ, ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು

ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–ಆದ ನಾನು, ಶ್ರೀ ಚಂದ್ರಹಾಸ ಶೆಟ್ಟಿ, ರಾತ್ರಿ ಕಾವಲುಗಾರರು, ಹಿಂದುಳಿದ ವರ್ಗಗಳ ಇಲಾಖಾ ಹೊಲಿಗೆ ತರಬೇತಿ ಕೇಂದ್ರ, ನಿಯೋಜನೆ ಮೇರೆಗೆ ಜವಾನ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957 ರ ನಿಯಮ 108 ರನ್ವಯ ತಕ್ಷಣದಿಂದ ಅನ್ವಯಿಸುವಂತೆ ಸೇವೆಯಿಂದ ವಜಾ ಮಾಡಿರುತ್ತೇನೆ.

ಸದರಿ ನೌಕರರ ದಿನಾಂಕ:01.03.2004 ರಿಂದ 17.04.2004 ರವರೆಗೆ 48 ದಿನಗಳು, ದಿನಾಂಕ:01.10.2004 ರಿಂದ 10.10.2004 ರವರೆಗೆ 10 ದಿನಗಳು, ದಿನಾಂಕ:05.11.2004 ರಿಂದ 17.01.2005 ರವರೆಗೆ 74 ದಿನಗಳು, ದಿನಾಂಕ:05.05.2005 ರಿಂದ 18.08.2005 ರವರೆಗೆ 106 ದಿನಗಳು ಮತ್ತು ದಿನಾಂಕ:16.02.2006 ರಿಂದ 24.09.2006 ರವರೆಗೆ 221 ದಿನಗಳು ಅಂದರೆ ಒಟ್ಟು 459 ದಿನಗಳವರೆಗಿನ ಅನಧಿಕೃತ ಗೈರು ಹಾಜರಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 254 ರನ್ವಯ ಲೆಕ್ಕಕ್ಕಿಲ್ಲದ ಅವಧಿ (Dies-non-service) ಎಂದು ಪರಿಗಣಿಸಿ ಆದೇಶಿಸಿದೆ.

ಜಿಲ್ಲಾ ಅಧಿಕಾರಿ,
ಹಿಂದುಳಿದ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆ,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು–4.

ಪಿ.ಆರ್.134

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು

**ವಿಷಯ:** ಶ್ರೀ ನಾರಾಯಣಪ್ಪ ಬಿನ್ ವೆಂಕಟಪ್ಪ ಮತ್ತು ಶ್ರೀ ವೆಂಕಟೇಶ್ ಬಿನ್ ನಾರಾಯಣಪ್ಪ, ಬಳ್ಳಗೆರೆ, ತುಮಕೂರು ತಾಲ್ಲೂಕು ಇವರ ಸ್ಥಿರಾಸ್ತಿಯು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿರುವ ಸ್ಥಿರಾಸ್ತಿಯನ್ನು ಪುನಃ ಸಾಲಗಾರರ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ:ಎ.ಆರ್.ಟಿ./ಎ.ಬಿ.ಎಸ್.ಸಿ.ಆರ್/9/2001–02, ದಿನಾಂಕ:20.04.2001.
2) ವ್ಯವಸ್ಥಾಪಕರು, ತುಮಕೂರು ತಾಲ್ಲೂಕು, ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ತಾಲ್ಲೂಕು ಇವರ ಪತ್ರಸಂಖ್ಯೆ: 64/07–08 ದಿನಾಂಕ:12.12.2007 ಮತ್ತು 01.01.2008.

**ಪ್ರಸ್ತಾವನೆ:**

ಶ್ರೀ ನಾರಾಯಣಪ್ಪ ಬಿನ್ ವೆಂಕಟಪ್ಪ ಮತ್ತು ವೆಂಕಟೇಶ್ ಬಿನ್ ನಾರಾಯಣಪ್ಪ, ಬಳ್ಳಗೆರೆ, ತುಮಕೂರು ತಾಲ್ಲೂಕು ಇವರು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನಲ್ಲಿ ಸ್ಥಿರಾಸ್ತಿಯನ್ನು ಆಧಾರ ಮಾಡಿ ಸಾಲ ಪಡೆದು ಸುಸ್ತಿದರರಾಗಿರುವುದರಿಂದ ಇವರಿಂದ ಬರಬೇಕಾದ ಅಸಲು, ಬಡ್ಡಿ, ಇತರೆ ಖರ್ಚು ಒಟ್ಟು ರೂ.32,918–00 ಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರ ಅಡಿಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ, ತುಮಕೂರು ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ:1158/ 97–98 ರಂತೆ ದಾವ ಹೂಡಿ ದಿನಾಂಕ:26.06.1998 ರಂದು ಅವಾರ್ಡ್ ಪಡೆದು ತೀರ್ಪಿನ ನಂತರದಲ್ಲಿಯೂ ಸಹ ಬಾಕಿ ಹಣ ಬ್ಯಾಂಕಿಗೆ ಜಮಾ ಮಾಡದ ಕಾರಣದಿಂದ ಡಿಕ್ರಿ ಹಣದ ವಸೂಲಾತಿಗಾಗಿ ಅಮಲ್ಜಾರಿ ಸಂಖ್ಯೆ: 334/98–99 ರಂತೆ ಅಮಲ್ಜಾರಿ ಪಡೆದು ದಿನಾಂಕ:26.04.2000ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿದ್ದು ಸದರಿ ದಿನಾಂಕದಂದು ಬಿಡ್ಡುದಾರರು ಬಾರದೇ ಇದ್ದರಿಂದ ಡಿಕ್ರಿ ಬಾಕಿದಾರನ ಸ್ಥಿರಸ್ವತ್ತುಗಳನ್ನು ಉಲ್ಲೇಖ (1)ರ ನಮೂದಿಸಿರುವ ಆದೇಶದ ರೀತ್ಯಾ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು.

ವ್ಯವಸ್ಥಾಪಕರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರು ಉಲ್ಲೇಖ (2)ರಲ್ಲಿ ನಮೂದಿಸಿರುವ ಪತ್ರದಲ್ಲಿ ಸಾಲಗಾರರು ದಿನಾಂಕ:30.04.2007 ರಂದು ರಸೀತಿ ಸಂಖ್ಯೆ:4554, 4555, 4556ರ ಪ್ರಕಾರ ಸಾಲ ತೀರುವಳಿ ಮಾಡಿರುತ್ತಾರೆ ಎಂಬುದಾಗಿ ಸಾಲ ತೀರುವಳಿ ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ದಿನಾಂಕ:26.07.2007 ರಂದು ನಡೆದ ಆಡಳಿತ ಮಂಡಳಿ ಸಭೆಯ ನಡವಳಿಕೆಯಲ್ಲಿ ಸಾಲಗಾರರು ಸಾಲ ತೀರುವಳಿ ಮಾಡಿರುವ ಹಿನ್ನೆಲೆಯಲ್ಲಿ ಶ್ರೀ ನಾರಾಯಣಪ್ಪ ಬಿನ್ ವೆಂಕಟಪ್ಪ ಮತ್ತು ವೆಂಕಟೇಶ್ ಬಿನ್ ನಾರಾಯಣಪ್ಪ, ಬಳ್ಳಗೆರೆ, ತುಮಕೂರು ತಾಲ್ಲೂಕು ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡಲು ಕೋರಿ ತೀರ್ಮಾನಿಸಿರುತ್ತಾರೆ.

ಸದರಿಯವರ ಮನವಿಯನ್ನು ಒಪ್ಪಿ ಉಲ್ಲೇಖ (1)ರಲ್ಲಿ ದಿನಾಂಕ:20.04.2001 ರಂದು ಹೊರಡಿಸಿದ ಆದೇಶದ ಸ್ಥಿರಾಸ್ತಿಗಳನ್ನು ಪುನರ್ ವಾಪಸ್ಸು ನೀಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಆದೇಶ

**ಕ್ರಮ ಸಂಖ್ಯೆ: ಎ.ಆರ್.ಟಿ./ಎ.ಬಿ.ಎನ್/09/2001–02, ದಿನಾಂಕ:25ನೇ ಜನವರಿ, 2008**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಗಮನಿಸಿ ಶ್ರೀ ಕೆ. ಗೋಪಾಲ ರೆಡ್ಡಿ, ಕೆ.ಸಿ.ಎಸ್., ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ ತುಮಕೂರು ಆದ ನಾನು ಕರ್ನಾಟಕ ಸಹಕಾರ

ಸಂಘಗಳ ನಿಯಮ 1960ರ ನಿಯಮ 38(ಎ) (15) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ/69/ ಸಿಎಲ್ಎಂ/2001 ದಿನಾಂಕ:21.11.2001ರ ರೀತ್ಯಾ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ, ಶ್ರೀ ನಾರಾಯಣಪ್ಪ ಬಿನ್ ವೆಂಕಟಪ್ಪ ಮತ್ತು ವೆಂಕಟೇಶ್ ಬಿನ್ ನಾರಾಯಣಪ್ಪ, ಬಳ್ಳಗೆರೆ, ತುಮಕೂರು ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ನೀಡಿದ್ದ ಸ್ಥಿರಾಸ್ತಿಯನ್ನು ಶ್ರೀ ನಾರಾಯಣಪ್ಪ ಬಿನ್ ವೆಂಕಟಪ್ಪ ಮತ್ತು ವೆಂಕಟೇಶ್ ಬಿನ್ ನಾರಾಯಣಪ್ಪ, ಬಳ್ಳಗೆರೆ, ತುಮಕೂರು ತಾಲ್ಲೂಕು ಇವರ ಹೆಸರಿಗೆ ಪುನರ್ ವರ್ಗಾವಣೆ (ರೆಸ್ಟೋರ್ಡ್) ಮಾಡಿ ಆದೇಶ ನೀಡಿರುತ್ತೇನೆ. ಈ ಆದೇಶಕ್ಕೆ ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ–8 ರ ನಿಗದಿತ ನಮೂನೆ ಸ್ಥಿರ ಸ್ವತ್ತುಗಳ ಪತ್ರವನ್ನು ಅಲಾಯಿದೆ ಲಗತ್ತಿಸಿದೆ.

ಈ ಕಛೇರಿಯ ಮೊಹರು ಹಾಗೂ ನನ್ನ ಸ್ವಹಸ್ತಾಕ್ಷರದೊಂದಿಗೆ ದಿನಾಂಕ:25.01.2008 ರಂದು ಪುನರ್ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ನಮೂನೆ–VIII**

**ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ಬಂಧ 38(ಎ) ನೋಡಿ ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 101ರ ಅನ್ವಯ ಪರಭಾರೆ ಬಗ್ಗೆ ಪ್ರಮಾಣ ಪತ್ರ**

**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಬಳ್ಳಗೆರೆ ಗ್ರಾಮದ, ನಾರಾಯಣಪ್ಪ ಬಿನ್ ವೆಂಕಟಪ್ಪ ಮತ್ತು ವೆಂಕಟೇಶ್ ಬಿನ್ ನಾರಾಯಣಪ್ಪ ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 71ರ ಅನ್ವಯ ಆದೇಶವನ್ನು ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ:20.04.2001ರಂದು ಈ ಕಛೇರಿ ಆದೇಶದ ಅಡಿಯಲ್ಲಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರಿಗೆ ವರ್ಗಾಯಿಸಿದ್ದು, ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಗಳನ್ನು ಮೂಲ ಹಕ್ಕುದಾರರಿಗೆ ಮರು ವರ್ಗಾಯಿಸುವಂತೆ ಬ್ಯಾಂಕಿನ ಕೋರಿಕೆ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು ಅಧಿಕಾರ, ನಾಮ ಮತ್ತು ಬಾದ್ಯತೆಗಳೂ ಶ್ರೀ ನಾರಾಯಣಪ್ಪ ಬಿನ್ ವೆಂಕಟಪ್ಪ ಮತ್ತು ವೆಂಕಟೇಶ ಬಿನ್ ನಾರಾಯಣಪ್ಪ, ಬಳ್ಳಗೆರೆ, ತುಮಕೂರು ತಾಲ್ಲೂಕು, ಇವರಿಗೆ ನಿರ್ದಿಷ್ಠವಾಗಿರತಕ್ಕದ್ದು ಮತ್ತು ಈ ಆದೇಶದಲ್ಲಿ ಸೇರಿಸಲ್ಪಟ್ಟ ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಒಪ್ಪಿಸತಕ್ಕದ್ದೆಂದು ಅಧಿನಿಯಮ 101ರ ಅನ್ವಯ ಈ ಪ್ರಮಾಣ ಪತ್ರ ನೀಡಲಾಗಿದೆ.

**ಸ್ವತ್ತುಗಳ ವಿವರ**

| ಗ್ರಾಮ | ಸರ್ವೆ ನಂ. | ವಿಸ್ತೀರ್ಣ | ತರಹೆ | ಹಕ್ಕುದಾರರ ವಿಳಾಸ | ಸ್ವತ್ತು ಒಳಬಡಿಸಲ್ಪಟ್ಟಿರುವ ಸಾಲಗಳ ತಪಶೀಲು |
|---|---|---|---|---|---|
| ಬಳ್ಳಗೆರೆ | 24/9ಬಿ | 0.06 | ಖುಷ್ಕಿ | ನಾರಾಯಣಪ್ಪ ಬಿನ್ ವೆಂಕಟಪ್ಪ ವೆಂಕಟೇಶ್ ಬಿನ್ ನಾರಾಯಣಪ್ಪ | ರೂ.33,500.00 ಮತ್ತು ಬಡ್ಡಿ ಇತರೆ ಖರ್ಚುಗಳು |
| ಬಳ್ಳಗೆರೆ | 41/7 | 0.08 | ಖುಷ್ಕಿ | –"– | |
| ಬಳ್ಳಗೆರೆ | 41/8 | 1.27 | ಖುಷ್ಕಿ | –"– | |
| ಬಳ್ಳಗೆರೆ | 24/5ಪಿ | 0.22 | ಖುಷ್ಕಿ | –"– | |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್.136

**IN THE COURT OF THE CIVIL JUDGE (JR.DN) & J.M.F.C., HARAPANAHALLI**

**NOTIFICATION**

It is notified that the unclaimed property vehicle i.e., Black Colored Hero Honda Splendor Motor Bike bearing Regn. No.KA.35-J-943 is seized by the Police Sub Inspector, Halavagalu Police Station, in Crime No.47/2005 under PF No.27/05, being numbered as CC 578/2005 against the accused person: H. Shivayogi. This case was disposed on 06.08.2005 and nobody claimed the property.

Hence, it is notified to the public that if anybody is owner of these properties may claim its ownership and shall appear before The Civil Judge (Jr.Dn.) & J.M.F.C., Harapanahalli and shall prove the ownership within two months from this day of notification. Otherwise, the vehicle will be sold in public auction before this Court within 6 months after the date of the Gazette Notification.

Given under my hand and seal of this Court Dated:27th day of August 2008.

Civil Judge (Jr.Dn.) & J.M.F.C.,
Harapanahalli.

PR-1020

**DISTRICT COURT BIDAR**
**NOTIFICATION**
**No.1/2008, Dated:18th July 2008**

In exercise of the powers conferred under section 4(b) of the Right to Information Act, 2005 (Central Act No.22 of 2005), the detailed information relating to the District Court, Bidar is published as hereunder, for the information of general public:

| | | |
|---|---|---|
| (i) | The particulars of its Organization functions and duties | **Organization:** District Court, Bidar. (Administration of Justice)<br>**Functions & Duties** All kinds of Administration of subordinate Courts of Bidar Unit. |
| (ii) | The powers and duties of its officers and employees | Details are as at Annexure-I |
| (iii) | The procedure followed in the decision making process, including channels of supervision and accountability | The concerned Case workers of Various sections or Branches especially relating to Administration shall open a new files on receipt of proposals or process and to putup proposals in the form of submission in the respective file or in the existing file. The case workers or Sheristedars of the concerned Branch or Section shall scrutinize the proposal and place it before the Chief administrative Officer. The Chief Administrative Officer shall review the proposals in the light of existing proviso of Rules, Circulars and guidelines of the Hon'ble High Court and the place it before the District Judge, for passing orders. The District Judge shall decide the Course of action to be taken on a proposal under the powers delegated and in doubtful cases to seek final decision or guidance by refer it to the Hon'ble High Court, if it is found necessary. |
| (iv) | The norms set by it for the discharge of its functions | The proposals will be finalized on priority, depending on urgency. |
| (v) | The rules, regulations, instructions, manuals and records, held by it or under its control or used by its employees for discharging its functions. | Details as per Annexure-II |
| (vi) | A statement of the categories of documents that are held by it or under its control | According to case file and relevant Registers. |
| (vii) | The particulars of any arrangement that exists for consultation with, or representation by, the members of the public in relation to the formulation of its policy or implementation thereof. | The State Public Information Officer shall give information. |
| (viii) | A statement of the boards, councils, committees and other bodies consisting of two or more persons constituted as its part or for the purpose of its advice and as to whether meetings of those boards, councils, committees and other bodies are open to the public, or the minutes of such meetings are accessible for public. | No such statutory committee, and as such question does not arise for giving information to the Public. |

| | | |
|---|---|---|
| (ix) | A Directory of its officers and employees | List of the officers and employees are kept in the establishment of District Court. The residential address of the employees maintained by the establishment of District Court. |
| (x) | The monthly remuneration received by each of its officers and employees, including the system of compensation as provided in its regulations. | The Sheristedar of the accounts Branch prepare the pay bills by maintaining the acquitance roll of the officers and employees which contain gross pay, deductions and net pay etc., The pay of the officers and employees will be changed from time to time in view of increase of D.A. rate and sanction of Annual Increment etc., |
| (xi) | The budget allocated to each of its agency, indicating the particulars of all plans, proposed expenditures and reports on disbursements made. | The Hon'ble High Court of Karnataka, allot the budget to District Court under nonplan scheme as and when. The Government release the fund to the Heads of Department. |
| (xii) | The manner of execution of subsidy programmes, including the amounts allocated and the details allocated and the details of beneficiaries of such programmes. | There is no such programmes. |
| (xiii) | Particulars of recipients of concessions, permits or authorizations granted by it. | There is no such programmes. |
| (xiv) | Details in respect of the information, available to or held by it, reduced an electronic form. | 1. The data entry of cases shall process through computers from the date of its filing till disposal and if it is not possible, the same will be processed in the concerned registers by manual.<br>2. Pay particulars of all the employees of District Court Bidar.<br>3. Issuance of certified copies by xerox or typed copies. |
| (xv) | The particulars of facilities available citizens for obtaining information, including the working hours of a library or reading room if maintained for public use. | The library containing Law Books and other Books meant only for the Hon'ble Judges and not for public use. |
| (xvi) | The names, designations and other particulars of the Public Information Officer. | S.M.M. Quadri,<br>Chief Administrative Officer, State Public Information Officer, District Court, Bidar.<br>Office Phone No.08482- 226448<br>Mobil No. 9448585359 |
| (xvii) | Such Other information as may be prescribed | -NIL- |

By Order of the District Judge
**S.M.M. QUADRI,**
Chief Administrative Officer,
District Court, Bidar.

**ANNEXURE-I**

**The powers and duties of the Officers and employees of the District Court, Bidar**

| | |
|---|---|
| Chief Administrative Officer | Heads of the Organization Acts, in their capacity as Head of the District Administration upon the advice/ directions of the Hon'ble District Judge & the High Court of Karnataka. |
| Sheristedars | Incharge of the whole Section/ Branch, scrutiny of files submitted by the case workers as per the procedure prescribed. |
| Stenographer/ Judgement Writer | Typing and stenography work entrusted by the Hon'ble Judges. |
| First Division Assistant | To attend to the job of case working as per duties cost on them.<br>To prepare Decree and to attend Library<br>To Maintain case registers<br>To arrange the case files according to cause list, to note the stage of cases according to court proceedings in case of attending Bench work.<br>To prepare statements. |
| Second Division Assistant | Incharge of Pending cases.<br>To attend open court/ any of the clerical work entrusted.<br>To attend Running Index, final Index, first and final entry.<br>To arrange the case files according to cause list, to note the stage of cases according to court proceedings in case of attending Bench work.<br>To prepare statements. |
| Typists and Typist-Copyists | Incharge of typing work both by Machine and computer.<br>To do any of Ministerial work of any section. |
| Bailiff | To attend the execution of warrants/ Injunctions/ delivery of possessions and bills of the account section. |
| Process-Servers | To attend service of summons/ Notices and any of the office work relating to Account Section. |
| Attenders | To keep the Chambers and open Courts neat and Clean.<br>To attend the duties of open court and Chambers. |
| Peon | To keep the office neat and tidy.<br>To deliver the files/ tappals to other sections<br>To attend watchman duty and any of the work entrusted. |

**ANNEXURE-II**

(v) The rules, regulations instructions, manuals and records, held by it or under its control or used by its employees for discharging its functions:

(a) Acts:

1) The Karnataka Court fee and suit Valuation Act 1958 & Rules 1960.
2) The Karnataka Stamp Act, 1957.
3) Civil Rules of Practice, 1967.
4) Criminal Rules of Practice, 1968,
5) Civil Court Act 1964.

## ಜಿಲ್ಲಾ ನ್ಯಾಯಾಲಯ ಬೀದರ
## ಅಧಿಸೂಚನೆ ನಂ.1/2008 ದಿನಾಂಕ:18ನೇ ಜುಲೈ, 2008

ಮಾಹಿತಿ ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ ಕಾಯ್ದೆ ನಂ.22/05) ಅಡಿಯಲ್ಲಿಯ ಕಲಂ 4 (1) (ಬಿ) ಅಡಿಯಲ್ಲಿ ಜಿಲ್ಲಾ ನ್ಯಾಯಾಲಯ ಬೀದರ ಬಗೆಗೆ ಸಂಬಂಧಿಸಿದ ಮಾಹಿತಿಯನ್ನು ಈ ಕೆಳಗಿನಂತೆ ಸಾರ್ವಜನಿಕವಾಗಿ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| | |
|---|---|
| ಕೈಪಿಡಿ–1 ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು | ಸಂಘಟನೆ–ಬೀದರ<br>ಕಾರ್ಯ ಮತ್ತು ಕರ್ತವ್ಯ–ನ್ಯಾಯಾಂಗ ಆಡಳಿತ ಕೆಳ ನ್ಯಾಯಾಲಯಗಳ ಆಡಳಿತ ಮತ್ತು ಇತರ ಆಡಳಿತಗಳು. |
| ಕೈಪಿಡಿ–2 ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರಿ ಮತ್ತು ವಿಧಿಗಳ ವಿವರ | ವಿವರಗಳು ಅನುಬಂಧ 1 ರಲ್ಲಿವೆ. |
| ಕೈಪಿಡಿ–3 ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳ ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು. | ವಿವಿಧ ವಿಭಾಗಗಳಲ್ಲಿ ಅಥವಾ ಶಾಖೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ವಿಷಯ ನಿರ್ವಾಹಕರು ಮುಖ್ಯವಾಗಿ ಆಡಳಿತ ವಿಷಯಕ್ಕೆ ಸಂಬಂಧ ಪಟ್ಟಂತೆ ಪ್ರಸ್ತಾವನೆಗಳನ್ನು ಸ್ವೀಕರಿಸಿದಾಗ ಹಾಗೂ ಸದರಿ ಕಾರ್ಯಗತಗೊಳಿಸುವ ಬಗ್ಗೆ ಒಂದು ಕಡತವನ್ನು ತೆರೆದು ಸದರಿ ಪ್ರಸ್ತಾವನೆಯನ್ನು ಸಂಬಂಧಪಟ್ಟ ಕಡತದಲ್ಲಿ ಅಥವಾ ಈಗಾಗಲೇ ತೆರೆದಿರುವ ಕಡತದಲ್ಲಿ ನಿವೇದನೆಯನ್ನು ಸಲ್ಲಿಸುವರು. ನಂತರ ಸಂಬಂಧ ಪಟ್ಟ ವಿಭಾಗದ ಅಥವಾ ಶಾಖೆಯಲ್ಲಿ ಶಿರಸ್ತೆದಾರರು ಸದರಿ ಪ್ರಸ್ತಾವನೆ: ನಿವೇದನೆಯನ್ನು ಪರಿಶೀಲಿಸಿ ಮುಖ್ಯ ಆಡಳಿತ ಅಧಿಕಾರಿಯವರ ಸಮಕ್ಷಮ ಮಂಡಿಸುವರು. ಮುಖ್ಯ ಆಡಳಿತ ಅಧಿಕಾರಿಯವರು ಸದರಿ ಪ್ರಸ್ತಾವನೆ: ನಿವೇದನೆಗಳನ್ನು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮ, ಸುತ್ತೋಲೆ ಹಾಗೂ ಮಾನ್ಯ ಉಚ್ಚ ನ್ಯಾಯಾಲಯದ ಮಾರ್ಗ ಸೂಚಿಗಳ ಬೆಳಕಿನಲ್ಲಿ ಪರಿಶೀಲಿಸಿ ಜಿಲ್ಲಾ ನ್ಯಾಯಾಧೀಶರುಗಳಿಗೆ ಸಲ್ಲಿಸುವರು. ಜಿಲ್ಲಾ ನ್ಯಾಯಾಧೀಶರು ಯಾವ ಕ್ರಮ ಕೈಗೊಳ್ಳಬೇಕೆಂದು ತಮಗೆ ಪ್ರದತ್ತವಾದ ಅಧಿಕಾರದ ಅಡಿಯಲ್ಲಿ ನಿರ್ಧರಿಸುವರು ಹಾಗೂ ಸಂಶಯಾತ್ಮಕ ಪ್ರಕರಣಗಳಲ್ಲಿ ಸದರಿ ಕಡತವನ್ನು ಅಗತ್ಯವಿದ್ದಲ್ಲಿ, ಮಾನ್ಯ ಉಚ್ಚ ನ್ಯಾಯಾಲಯಕ್ಕೆ ಅಂತಿಮ ತೀರ್ಮಾನಕ್ಕೋಸ್ಕರ ಅಥವಾ ಮಾರ್ಗದರ್ಶನಕ್ಕೋಸ್ಕರ ಕಳುಹಿಸುವರು. |
| ಕೈಪಿಡಿ–4 ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು. | ವಿಷಯ ಪ್ರಸ್ತಾವನೆಯ ತುರ್ತನ್ನು ಅವಲಂಬಿಸಿ ಬೇಡಿಕೆಯನ್ನು ಆದ್ಯತೆಯ ಮೇರೆಗೆ ಕೊನೆಗೊಳಿಸಲಾಗುವುದು. |
| ಕೈಪಿಡಿ–5: ಇಲಾಖೆಯ ಅಧೀನದಲ್ಲಿರುವ ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು. | ವಿವರಗಳು ಅನುಬಂಧ 1 ರಲ್ಲಿವೆ. |
| ವಿನಿಮಯಗಳು, ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ, ಕಛೇರಿ ಕೈಪಿಡಿ, ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು. | |
| ಕೈಪಿಡಿ–7 ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ವ್ಯವಸ್ಥೆ ಮತ್ತು ವಿವರ. | ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯವರು ಮಾಹಿತಿಗಳನ್ನು ನೀಡುತ್ತಾರೆ. |
| ಕೈಪಿಡಿ–8 ಇಲಾಖೆಯಲ್ಲಿರುವ ನಿಗಮ: ಪರಿಷತ್ತು:ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಗಳು ಲಭ್ಯವಿರುವ ಬಗ್ಗೆ. | ಅಂಥ ಶಾಸನಾತ್ಮಕ ಸಮಿತಿಗಳಿರುವುದಿಲ್ಲ.<br><br>ಸಾರ್ವಜನಿಕರಿಗೆ ಮಾಹಿತಿ ನೀಡುವ ಪ್ರಶ್ನೆಯೇ ಇಲ್ಲ. |

| | |
|---|---|
| ಕೈಪಿಡಿ–9 ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ | ಅಧಿಕಾರಿಗಳ ಹಾಗೂ ನೌಕರರ ಯಾದಿ ಜಿಲ್ಲಾ ನ್ಯಾಯಾಲಯ ಆಡಳಿತ ವಿಭಾಗದಲ್ಲಿದೆ. ನೌಕರರ ವಾಸ್ತವ್ಯದ ವಿಳಾಸವು ಆಗಾಗ ಬದಲಾಗುತ್ತಿರುವುದರಿಂದ ಜಿಲ್ಲಾ ನ್ಯಾಯಾಲಯದ ಆಡಳಿತ ವಿಭಾಗವು ಸದರಿ ಬದಲಾವಣೆಗಳನ್ನು ಪರಿಗಣಿಸಲು ಕೋರಲಾಗಿದೆ. |
| ಕೈಪಿಡಿ–10 ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದ ತಿಂಗಳ ಪ್ರತಿ ಫಲ ಮತ್ತು ಅದನ್ನು ನೀಡುವ ಸೂತ್ರಗಳು. | ವಾರ್ಷಿಕ ಬಡ್ತಿ: ತುಟ್ಟಿ ಭತ್ಯೆ ದರದಲ್ಲಿನ ಹೆಚ್ಚಳದಿಂದಾಗಿ ಒಬ್ಬ ಅಥವಾ ಇತರ ನೌಕರರು: ಅಧಿಕಾರಿಗಳ ಮಾಸಿಕ ವೇತನದಲ್ಲಿ ಬದಲಾವಣೆಗಳಾಗುತ್ತವೆ. ಪ್ರತಿ ತಿಂಗಳು ನಗದು ವಿಭಾಗದ ಸಂಬಂಧಪಟ್ಟ ಶಿರಸ್ತೇದಾರ್: ಗುಮಾಸ್ತ ಇವರು ವೇತನ ಬಿಲ್ಲನ್ನು ತಯಾರು ಮಾಡುವ ಸಂದರ್ಭದಲ್ಲಿ ಎಲ್ಲಾ ನೌಕರರ ಒಟ್ಟು ವೇತನ, ಕಡತಗಳು, ನಿವ್ವಳ ವೇತನ ಇವುಗಳನ್ನು ವೇತನ ಪಟ್ಟಿಯಲ್ಲಿ ನಮೂದಿಸಿರುವರು. |
| ಕೈಪಿಡಿ–11 ಇಲಾಖೆಯಲ್ಲಿರುವ ವಲಯ: ವಿಭಾಗಗಳಿಗೆ ನೀಡುತ್ತಿರುವ ಆಯವ್ಯಯದ ವಿವರಗಳು. | ಸರ್ಕಾರವು ಆರ್ಥಿಕ ಹಂಚಿಕೆಯ ವಿಧಿಯನ್ನು ಇಲಾಖಾ ಮುಖ್ಯಸ್ಥರಿಗೆ ಬಿಡುಗಡೆ ಮಾಡಿದಾಗ ಮಾನ್ಯ ಉಚ್ಚ ನ್ಯಾಯಾಲಯವು ಆಯವ್ಯಯ ಹಂಚಿಕೆಯನ್ನು ಯೋಜನೇತರ ಅಡಿಯಲ್ಲಿ ಜಿಲ್ಲಾ ನ್ಯಾಯಾಲಯಕ್ಕೆ ನೀಡುವರು. |
| ಕೈಪಿಡಿ–12 ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳಿಗೆ ವಿವರಗಳು. | ಅಂಥ ಯಾವುದೇ ಕಾರ್ಯಕ್ರಮಗಳಿರುವುದಿಲ್ಲ. |
| ಕೈಪಿಡಿ–13 ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರಿಗಳ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವವರ ವಿವರ. | ಅಂಥ ಯಾವುದೇ ಕಾರ್ಯಕ್ರಮಗಳಿರುವುದಿಲ್ಲ. |
| ಕೈಪಿಡಿ–15 ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ. | ಗ್ರಂಥಾಲಯವು ಮಾನ್ಯ ನ್ಯಾಯಾಧೀಶರುಗಳಿಗೆ ಹಾಗೂ ನ್ಯಾಯಾಲಯದ ಸಿಬ್ಬಂದಿಗಳ ಉಪಯೋಗಕ್ಕೆ ಲಭ್ಯವಿದ್ದು ಸಾರ್ವಜನಿಕರ ಉಪಯೋಗಕ್ಕೆ ಲಭ್ಯವಿರುವುದಿಲ್ಲ. |
| ಕೈಪಿಡಿ–16 ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ, ಮತ್ತು ಇತರ ವಿವರಗಳು. | ಎಸ್.ಎಂ.ಎಂ. ಖಾದ್ರಿ ಮತ್ತು ಆಡಳಿತಾಧಿಕಾರಿಗಳು ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ ಜಿಲ್ಲಾ ನ್ಯಾಯಾಲಯ, ಬೀದರ.<br>ದೂರವಾಣಿ:08482–226448<br>ಮೊಬೈಲ್: 9448818145 |
| ಕೈಪಿಡಿ–17 ಇತರ ವಿವರಗಳು | ಇರುವುದಿಲ್ಲ. |

ಜಿಲ್ಲಾ ನ್ಯಾಯಾಧೀಶರ ಆದೇಶದ ಮೇರೆಗೆ,
**ಎಸ್.ಎಂ.ಎಂ. ಖಾದ್ರಿ,**
ಮುಖ್ಯ ಆಡಳಿತಾಧಿಕಾರಿಗಳು,
ಜಿಲ್ಲಾ ನ್ಯಾಯಾಲಯ, ಬೀದರ.

**ಅನುಬಂಧ–1**

**ಜಿಲ್ಲಾ ನ್ಯಾಯಾಲಯ ಬೀದರ ಇಲ್ಲಿನ ಅಧಿಕಾರಿಗಳ ಹಾಗೂ ನೌಕರರ ಕರ್ತವ್ಯಗಳು ಮತ್ತು ಅಧಿಕಾರಗಳು**

| | |
|---|---|
| ಮುಖ್ಯ ಆಡಳಿತ ಅಧಿಕಾರಿ | ಮಾನ್ಯ ಉಚ್ಚ ನ್ಯಾಯಾಲಯ ಮತ್ತು ಜಿಲ್ಲಾ ನ್ಯಾಯಾಧೀಶರ ಸಲಹೆ: ನಿರ್ದೇಶನಗಳ ಮೇರೆಗೆ ಜಿಲ್ಲಾ ಆಡಳಿತದ ಮುಖ್ಯಸ್ಥರಾಗಿ ಕೆಲಸ ನಿರ್ವಹಿಸುತ್ತಾರೆ. |
| ಶಿರಸ್ತೇದಾರ್ | ಸಂಪೂರ್ಣ ವಿಭಾಗ: ಶಾಖೆಯ ಪ್ರಭಾರಧಾರಕರಾಗಿದ್ದು ವಿಷಯ ನಿರ್ವಾಹಕರು ಮಂಡಿಸಿದ ಕಡತಗಳನ್ನು ನಿಗದಿತ ನಿಯಮಾವಳಿಗಳಡಿ ಪರಿಶೀಲಿಸುತ್ತಾರೆ. |

| | |
|---|---|
| ಶೀಘ್ರ ಲಿಪಿಗಾರರು: ತೀರ್ಪು ಬರಹಗಾರರು | ಮಾನ್ಯ ನ್ಯಾಯಾಧೀಶರು ತಮಗೆ ವಹಿಸಿಕೊಟ್ಟ ಬೆರಳಚ್ಚು ಮತ್ತು ಶೀಘ್ರಲಿಪಿ ಕೆಲಸ ಟೈಪ್ ಮುಖಾಂತರ ಅಥವಾ ಗಣಕಯಂತ್ರದಲ್ಲಿ ನಿರ್ವಹಿಸುವುದು. |
| ಪ್ರಥಮ ದರ್ಜೆ ಸಹಾಯಕ | ತಮಗೆ ವಹಿಸಿಕೊಟ್ಟ ಕಡತಗಳಿಗೆ ಸಂಬಂಧ ಪಟ್ಟಂತೆ ವಿಷಯ ನಿರ್ವಹಣೆ ಡಿಕ್ರಿ ತಯಾರಿಸುವುದು ಮತ್ತು ಗ್ರಂಥ ಭಂಡಾರ ಸಹಾಯಕನಾಗಿ ಕರ್ತವ್ಯ ನಿರ್ವಹಿಸುವುದು. ಕಡತಗಳಿಗೆ ಸಂಬಂಧಪಟ್ಟ ವಹಿಗಳನ್ನು ನಿರ್ವಹಿಸುವುದು ನ್ಯಾಯ ಪೀಠದ ಸಹಾಯಕನಾಗಿ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ಪ್ರಕರಣಗಳ ಪಟ್ಟಿಯನ್ನು ಸಿದ್ಧ ಪಡಿಸುವುದು. ಹಾಗೂ ಪ್ರಕರಣ ಯಾವ ಹಂತದಲ್ಲಿದೆಯೆಂಬುದನ್ನು ನ್ಯಾಯಾಲಯದ ಕಲಾಪಗಳನ್ವಯ ದಾಖಲಿಸುವುದು ವಿವರಣಾ ಪಟ್ಟಿಗಳನ್ನು ಸಿದ್ಧಪಡಿಸುವುದು. |
| ದ್ವಿತೀಯ ದರ್ಜೆ ಸಹಾಯಕ | ಚಾಲ್ತಿ ಕಡತಗಳ ಪ್ರಭಾರ ಧಾರಕನಾಗಿ ಕರ್ತವ್ಯ ನಿರ್ವಹಿಸುವುದು ತೆರೆದ ನ್ಯಾಯಾಲಯದಲ್ಲಿ: ತನಗೆ ವಹಿಸಿಕೊಟ್ಟ ಯಾವುದೇ ಲಿಪಿಕ ಕೆಲಸವನ್ನು ನಿರ್ವಹಿಸುವುದು ಚಾಲ್ತಿ ಕಡತಗಳಲ್ಲಿ: ನಿಖಾಲೆಯಾದ ಕಡತಗಳ ಅನುಕ್ರಮ ಜೋಡಣೆಯ ಕೆಲಸ ನಿರ್ವಹಿಸುವುದು ಪ್ರಥಮ ದಾಖಲೆಯ ಹಾಗೂ ಅಂತಿಮ ತೀರ್ಮಾನದ ವಿವರವನ್ನು ಸಂಬಂಧಿಸಿದ ರಿಜಿಸ್ಟರ್‌ನಲ್ಲಿ ದಾಖಲಿಸುವುದು ಪ್ರಕರಣಗಳ ಪಟ್ಟಿಗಳನ್ನು ತಯಾರಿಸಿ ಆ ಪ್ರಕಾರ ಕಡತಗಳನ್ನು ಜೋಡಿಸುವುದು. ನ್ಯಾಯಪೀಠದ ಸಹಾಯಕನ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ಪ್ರಕರಣಗಳ ಹಂತವನ್ನು ಆರ್ಡರ್ ಶೀಟಿನಲ್ಲಿ ನ್ಯಾಯಾಲಯ ಕಲಾಪಗಳಿಗನ್ವಯವಾಗಿ ನಮೂದಿಸುವುದು.<br>ವಿವರಣಾ ಪಟ್ಟಿ ಸಿದ್ಧ ಪಡಿಸುವುದು. |
| ಬೆರಳಚ್ಚುಗಾರರು ಮತ್ತು ನಕಲು ಬೆರಳಚ್ಚುಗಾರರು | ಬೆರಳಚ್ಚು ಯಂತ್ರ: ಗಣಕಯಂತ್ರ ಮುಖಾಂತರ ಬೆರಳಚ್ಚು ಕೆಲಸ ನಿರ್ವಹಿಸುವುದು. ತಮಗೆ ವಹಿಸಿಕೊಟ್ಟ ಯಾವುದೇ ವಿಭಾಗಕ್ಕೆ ಸಂಬಂಧಪಟ್ಟ ಲಿಪಿಕ ಕರ್ತವ್ಯವನ್ನು ಸಹ ನಿರ್ವಹಿಸುವುದು. |
| ಆದೇಶಿಕೆ ಜ್ಯಾರಿಕಾರರು | ನ್ಯಾಯಾಲಯಗಳು ಹೊರಡಿಸಿದ ಸೂಚನಾ ಪತ್ರ: ಕರೆ (Notice/ Summons) ಗಳನ್ನು ಜಾರಿಗೊಳಿಸುವುದು ಹಾಗೂ ನಗದು ವಿಭಾಗಕ್ಕೆ ಸಂಬಂಧಪಟ್ಟ ಯಾವುದೇ ಕಛೇರಿ ಕೆಲಸಕ್ಕೆ ಹಾಜರಾಗುವುದು. |
| ಬೇಲಿಫ್ | ಮಾನ್ಯ ನ್ಯಾಯಾಲಯಗಳು ಹೊರಡಿಸಿದ ವಾರಂಟ್: ತಡೆಯಾಜ್ಞೆ: ಸ್ವಾಧೀನ ಅಧಿಪತ್ರಗಳನ್ನು ಜಾರಿಗೊಳಿಸುವುದು ನಗದು ವಿಭಾಗದ ಬಿಲ್‌ಗಳನ್ನು ಹಾಜರುಪಡಿಸುವ ಕರ್ತವ್ಯ ನಿರ್ವಹಿಸುವುದು. |
| ಅಟೆಂಡರ್ | ನ್ಯಾಯಾಧೀಶರ ಕೊಠಡಿ ಮತ್ತು ನ್ಯಾಯಾಲಯಗಳನ್ನು ಕ್ರಮಬದ್ಧವಾಗಿ ಸ್ವಚ್ಛವಾಗಿಡುವುದು ಹಾಗೂ ಕಲಾಪ ನಡೆದ ಸಂದರ್ಭದಲ್ಲಿ ಕೆಲಸಗಳಿಗೆ ಸಹಕರಿಸುವುದು. ಇನ್ನಿತರ ಯಾವುದೇ ಕೆಲಸ ನಿರ್ವಹಿಸುವುದು. |
| ಜವಾನ | ತೆರೆದ ನ್ಯಾಯಾಲಯ ಹಾಗೂ ನ್ಯಾಯಾಧೀಶರ ಕೊಠಡಿಯಲ್ಲಿನ ಕರ್ತವ್ಯ ನಿರ್ವಹಿಸುವುದು ಕಛೇರಿಯನ್ನು ಸ್ವಚ್ಛವಾಗಿ ಕಸರಹಿತವಾಗಿಡುವುದು.<br>ಕಡತ: ಟಪ್ಪಾಲುಗಳನ್ನು ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ನೀಡುವುದು.<br>ತಮಗೆ ವಹಿಸಿಕೊಟ್ಟ ಯಾವುದೇ ಕೆಲಸ ನಿರ್ವಹಿಸುವುದು ರಾತ್ರಿ ಪಹರೆಯ ಕರ್ತವ್ಯ ನಿರ್ವಹಿಸುವುದು. |

ತಮ್ಮ ನಿಯಂತ್ರಣದಲ್ಲಿ ಹೊಂದಿರುವ ಅಥವಾ ತಮ್ಮ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ನೌಕರರು ಬಳಸುವ ನಿಯಮಗಳು, ನಿಯಂತ್ರಣಗಳು, ನಿರ್ದೇಶನಗಳು, ಕೈಪಿಡಿ ಮತ್ತು ದಾಖಲೆಗಳು.

**ಅ) ಕಾಯಿದೆಗಳು**

1) ಕರ್ನಾಟಕ ನ್ಯಾಯಾಲಯ ಶುಲ್ಕ ಮತ್ತು ದಾವೆಗಳ ಮೌಲ್ಯ ಮಾಪನ ಕಾಯಿದೆ 1958 ಮತ್ತು ನಿಯಮಗಳು 1960

2) ಕರ್ನಾಟಕ ಸ್ಟಾಂಪ್ ಕಾಯಿದೆ 1957

3) ಕರ್ನಾಟಕ ದಿವಾಣಿ ವ್ಯವಹಾರಿಕ ನಿಯಮಗಳು 1967

4) ಕರ್ನಾಟಕ ಫೌಜುದಾರಿಕೆ ವ್ಯವಹಾರಿಕ ನಿಯಮಗಳು 1908

5) ದಿವಾಣಿ ನ್ಯಾಯಾಲಯಗಳ ಕಾಯಿದೆ 1964

**ಆ) ನಿಯಮಗಳು:**

1) ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರ ಹುದ್ದೆಗಳು) ನೇಮಕಾತಿ ನಿಯಮಗಳು 1982.

2) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957.

3) ಅಧೀನ ನ್ಯಾಯಾಲಯಗಳ ದಿವಾಣಿ ಮತ್ತು ಫೌಜುದಾರಿಕಾ ಲೆಕ್ಕ ನಿಯಮಗಳು 1967.

4) ಕರ್ನಾಟಕ ನಾಗರೀಕರ ಸೇವೆ (ಸಿ.ಸಿ.ಎ. ನಿಯಮಗಳು) 1957.

5) ಕರ್ನಾಟಕ ನಾಗರೀಕ ಸೇವೆ (ಖಾಯಂ ಪೂರ್ವ ತರಬೇತಿ) ನಿಯಮಗಳು 1977

6) ಕರ್ನಾಟಕ ನಾಗರೀಕ ಸೇವೆ (ಭತ್ಯೆ, ವೇತನ ಮತ್ತು ವಿಶ್ರಾಂತಿ ವೇತನಗಳ ನಿಯಂತ್ರಣ) ನಿಯಮ 1978

7) ಕರ್ನಾಟಕ ನಾಗರೀಕ ಸೇವೆ (ವೈದ್ಯಕೀಯ ಸಹಾಯಕ) ನಿಯಮಗಳು 1963

8) ಸಾಮಾನ್ಯ ನೇಮಕಾತಿ ನಿಯಮ 1977

9) ಕರ್ನಾಟಕ ನಾಗರೀಕ ಸೇವೆ (ಬೆರಳಚ್ಚುಗಾರ ಮತ್ತು ಕಿರಿಯ ಸಹಾಯಕ: ದ್ವಿತೀಯ ದರ್ಜೆ ಸಹಾಯಕ ಹುದ್ದೆ ಬದಲಾವಣೆ) ನಿಯಮಗಳು 1964.

10) ಕರ್ನಾಟಕ ನಾಗರೀಕ ಸೇವೆ (ಕಾರ್ಯನಿರ್ವಹಣೆ ವರದಿ) ನಿಯಮಗಳು–2000

11) ಕರ್ನಾಟಕ ನಾಗರೀಕರ ಸೇವೆ (ಜೇಷ್ಠತೆ) ನಿಯಮಗಳು 1957.

12) ಕರ್ನಾಟಕ ನಾಗರೀಕ (ಕಾಲನಿಯಮ ಬಡ್ತಿ ಯೋಜನೆ) ನಿಯಮಗಳು 1983.

13) ಕರ್ನಾಟಕ ನಾಗರೀಕ ಸೇವೆ (ಹಿರಿಯ ವೇತನ ಶ್ರೇಣಿಗೆ ಸ್ವಯಂ ಚಾಲಿತ ವೇತನ ಬಡ್ತಿ) ನಿಯಮಗಳು 1991.

14) ಸ್ಥಗಿತ ವೇತನ ಬಡ್ತಿ ಮಂಜೂರು ನಿಯಮಗಳು 1996.

15) ಕರ್ನಾಟಕ ನಾಗರೀಕ ಸೇವೆ (ಕನ್ನಡ ಭಾಷಾ ಪರೀಕ್ಷೆ) ಕಾಯಿದೆ 1978.

16) ವಕೀಲರ ಗುಮಾಸ್ತರ ನಿಯಮಗಳು 1967.

17) ದಸ್ತಾವೇಜು ಬರಹಗಾರರ ನಿಯಮ 1966.

18) ಪರಿಶಿಷ್ಟ ಜಾತಿ: ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳಿಗೆ ನೇಮಕಾತಿಯಲ್ಲಿ ಮೀಸಲಾತಿ ನಿಯಮಗಳು.

ಇ) ನಿರ್ದೇಶನಗಳು, ಕೈಪಿಡಿ ಇತ್ಯಾದಿ

1) ಕರ್ನಾಟಕ ಆರ್ಥಿಕ ಸಂಹಿತೆ

2) ಕರ್ನಾಟಕ ಖಜಾನೆ ಸಂಹಿತೆ

3) ಸಂಭವನೀಯ ವೆಚ್ಚಗಳ ಕೈಪಿಡಿ

4) ಪೌಜಿದಾರಿ ಪ್ರಕ್ರಿಯಾ ಸಂಹಿತೆ

5) ದಿವಾಣಿ ಪ್ರಕ್ರಿಯಾ ಸಂಹಿತೆ

6) ಭಾರತೀಯ ದಂಡ ಸಂಹಿತೆ

7) ಆಡಳಿತಾತ್ಮಕ ಕೈಪಿಡಿ

8) ಮಾಜಿ ಸೈನಿಕರ ಮೀಸಲಾತಿ ನಿರ್ದೇಶನ

9) ಪರಿಶಿಷ್ಟ ಜಾತಿ: ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳ ರೋಸ್ಟರ್ ಪ್ರಕಾರ ಮೀಸಲಾತಿ ನಿರ್ದೇಶನಗಳು.

ಅವರಲ್ಲಿರುವ ಮತ್ತು ಅಧೀನದಲ್ಲಿರುವ ದಸ್ತಾವೇಜುಗಳ ನಮೂನೆಗಳ ಪಟ್ಟಿ–ಗ್ರೂಪ್ ಸಿ ಮತ್ತು ಗ್ರೂಪ್ ಡಿ ನೌಕರರ ಈ ಕೆಳಗೆ ನಮೂದಿಸಿದ ದಸ್ತಾವೇಜುಗಳು.

1) ಸೇವಾ ವಹಿಗಳು.

2) ವಾರ್ಷಿಕ ಕಾರ್ಯನಿರ್ವಹಣಾ ವರದಿ.

3) ಆಸ್ತಿ ಮತ್ತು ಹೊಣೆಗಾರಿಕಾ ವಿವರಣಾ ಪಟ್ಟಿ.

By Order of the District Judge

**S.M.M. QUADRI,**

Chief Administrative Officer,

District Court, Bidar.

PR-1019

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ವಿಷಯ:** ಸಮಾಪನಾ ಆದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಚೋರಡಿ–1, ಶಿವಮೊಗ್ಗ ತಾ: ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:**1) ಶಿವಮೊಗ್ಗ ಜಿಲ್ಲಾ ಸ.ಸಂ.ಗಳ ಉಪ–ನಿಬಂಧಕರು, ಶಿವಮೊಗ್ಗ ರವರ ಆದೇಶ ಸಂಖ್ಯೆ: ಡಿಆರ್‌ಎಸ್:ಎಲ್‌ಕ್ಯೂಡಿ: ಡಿಐಎಸ್:246:06–07, ದಿನಾಂಕ:31.01.2007.

2) ಸ.ಸಂ.ಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಸನಿ–24:ಸಮಾಪನೆ:33:06–07:ದಿನಾಂಕ:19.12.2007.

**ಪ್ರಸ್ತಾವನೆ:**

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಚೋರಡಿ–1, ಶಿವಮೊಗ್ಗ ತಾಲ್ಲೂಕು ಈ ಸಂಘವು ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಇವರ ಕಾರ್ಯಾಲಯದಲ್ಲಿ ನೊಂದಣಿ ಸಂಖ್ಯೆ: ಎಆರ್–24: ನೊಂದಣಿ: ಆರ್‌ಜಿಎನ್:96:28666:2000–01 ದಿನಾಂಕ:30.12.2000 ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು 8 ಗ್ರಾಮಗಳನ್ನು ಒಳಗೊಂಡಿದ್ದು, 76 ಜನ ಸದಸ್ಯರಿರುತ್ತಾರೆ. ಈ ಸಂಘವು ತನ್ನ ಉದ್ದೇಶಗಳಿಗನುಸಾರವಾಗಿ ಯಾವುದೇ ಕಾರ್ಯಚಟುವಟಿಕೆಗಳನ್ನು ನಡೆಸಿರುವುದಿಲ್ಲವಾದ್ದರಿಂದ ಸಂಘವನ್ನು ಸಮಾಪನೆಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಇವರ ಶಿಫಾರಸ್ಸಿನನ್ವಯ ಈ ಕಛೇರಿಯಿಂದ ಉಲ್ಲೇಖ (1)ರಲ್ಲಿ ಸಮಾಪನಾ ಆದೇಶ ಹೊರಡಿಸಲಾಗಿರುತ್ತದೆ. ಹಾಗೂ ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು, ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಇವರನ್ನು ನೇಮಕ ಮಾಡಲಾಗಿರುತ್ತದೆ. ಸಂಘದ ಸಮಾಪನಾಧಿಕಾರಿಯವರು ಸಮಾಪನಾ ಸಂಘದ ಪ್ರಭಾರವನ್ನು ವಹಿಸಿಕೊಂಡು ನೊಂದಣಿ ರದ್ಧತಿಗೆ ಕ್ರಮವಿಟ್ಟಿರುವುದು ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಇವರ ಪತ್ರದಿಂದ ತಿಳಿದು ಬಂದಿರುತ್ತದೆ.

ಸಂಘದಲ್ಲಿ ಯಾವುದೇ ಚರ ಮತ್ತು ಸ್ಥಿರಾಸ್ತಿಗಳಿಲ್ಲದಿರುವುದರಿಂದ ಉಳಿತಾಯ ಖಾತೆಯಲ್ಲಿ ಕೇವಲ ರೂ.539–00 ಗಳು ಮಾತ್ರವಿರುವುದರಿಂದ ಸಮಾಪನಾಧಿಕಾರಿಗಳು ಆದ್ಯತಾ ಪಟ್ಟಿಯ ಅನುಮೋದನೆಗೆ ಪ್ರಸ್ತಾವನೆ ಸಲ್ಲಿಸಿರುವುದಿಲ್ಲ. ಸಂಘದ ಲೆಕ್ಕಪತ್ರಗಳನ್ನು ದಿನಾಂಕ:31.03.2005ರವರೆಗೆ ಆಡಿಟ್ ಮಾಡಿಸಿರುತ್ತಾರೆ. ದಿನಾಂಕ:01.04.2005 ರಿಂದ 31.03.2006 ರವರೆಗೆ ಜಮಾ ಖರ್ಚು ತಯಾರಿಸಿ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಸಂಘದ ಸಮಾಪನಾಧಿಕಾರಿಗಳು ದಿನಾಂಕ:13.09.2007ರಂದು ಅಂತಿಮ ಸಭೆ ನಡೆಸಿ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಸಭೆಯಲ್ಲಿ ನಿರ್ಣಯಿಸಿ ನಡವಳಿಕೆ ಸಲ್ಲಿಸಿರುತ್ತಾರೆ. ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ ಇವರು ಸದರಿ ಪ್ರಸ್ತಾವೆಯನ್ನು ಪರಿಶೀಲಿಸಿ ಉಲ್ಲೇಖ (2)ರಲ್ಲಿ ಸಂಘದ ನೊಂದಣಿ ರದ್ಧತಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ನಿರ್ಣಯ, ಸಹಾಯಕ ನಿಬಂಧಕರವರ ಶಿಫಾರಸ್ಸಿನ ಆಧಾರಿತವಾಗಿ ನೊಂದಣಿ ರದ್ಧತಿಗೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರ.ಸಂ. ಡಿಆರ್‌ಎಸ್:ಸಮಾಪನೆ: ಡಿಐಎಸ್:249:07–08/1720, ದಿನಾಂಕ:23ನೇ ಜನವರಿ, 2008**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001: ದಿನಾಂಕ:21.11.2001 ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ, ಸಿ.ಎನ್. ದೇವರಾಜು, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಚೋರಡಿ–1, ಶಿವಮೊಗ್ಗ ತಾಲ್ಲೂಕು ಇದರ ನೊಂದಣಿ ಸಂಖ್ಯೆ: ಎಆರ್–24, ನೊಂದಣಿ: ಆರ್‌ಜಿಎನ್:096:28666:2000–01 ದಿನಾಂಕ:30.12.2000 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು, ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ ಇವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:23ನೇ ಜನವರಿ, 2008 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.186

**WOMEN AND CHILD DEVELOPMENT DEPARTMENT**

**NOTIFICATION**

**No.WCD 247 SJD 2008, Bangalore, Dated:29th July, 2008**

The name of Smt. "Shazeedunnisa" Supervisor (Retired), Child Development Project Office, Kundapura, D.K. District, is wrongly notified as "Shmehadunnisa" in Gazette Notification No.SWL 10 SJD 1980 Dated:24.09.1985 and the same shall be read as "Shazeedunnisa".

By Order in the name of Governor of Karnataka,

**R.M. CHANDRAMMA**

PR-947

Under Secretary to Government-2,

Department of Women and Child Development.

**KARNATAKA ADMINISTRATIVE TRIBUNAL, BANGALORE-38**

**NOTIFICATION**

**No.KAT/EST(1)/ RET/NOTFN/NAL-REG/08, Dated:1st August, 2008**

In view of Government Order No. SIAaaSuE 44 SeNiSi 2008, Bangalore, Dated:28.07.2008 enhancing the age of retirement of Government employees from 58 to 60 years, the Notification even No.Dated:31.05.2008 in hereby withdrawn.

BY ORDER OF HON'BLE THE CHAIRMAN,

PR-948

Registrar,

Karnataka Administrative Tribunal, Bangalore-38.

**ವಸತಿ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ವಇ 34 ಕೊಮಂಇ 2004, ಬೆಂಗಳೂರು, ದಿನಾಂಕ:23ನೇ ಜೂನ್, 2005**

ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಬೆಂಗಳೂರು ಮಹಾನಗರಪಾಲಿಕೆಯ ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ವೆಂಕಟರಮಣ ಕೊಳಚೆ ಪ್ರದೇಶವನ್ನು ಸರ್ಕಾರವು ತಮ್ಮ ಅಧಿಸೂಚನೆ ಸಂಖ್ಯೆ: ಹೆಚ್‌ಯುಡಿ 63 ಎಂಸಿಎಸ್ 77, ದಿನಾಂಕ:28.09.1979/ 05.10.1979 ರಲ್ಲಿ ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಅಧಿನಿಯಮ 1973 ಕಲಂ 11 ರನ್ವಯ ಕೊಳಚೆ ನಿರ್ಮೂಲನ ಪ್ರದೇಶವೆಂದು ಅಂತಿಮವಾಗಿ ಘೋಷಿಸಲಾಗಿದೆ.

ಸದರಿ ಪ್ರದೇಶವನ್ನು ಅಭಿವೃದ್ಧಿಗೊಳಿಸಿ ಅಲ್ಲಿ ವಾಸಿಸುವ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಉದ್ದೇಶಿಸಿದ್ದು, ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಅಧಿನಿಯಮ ಕಲಂ 17ರಂತೆ ಭೂ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವೆಂದು ಮನಗಂಡು ಸರ್ಕಾರದ ಅಧಿಸೂಚನೆ ಸಂಖ್ಯೆ:ವಇ 192 ಎಂಸಿಎಸ್ 82 (II), ದಿನಾಂಕ:14.10.1982 ರಲ್ಲಿ ಪ್ರಾರಂಭಿಕವಾಗಿ ಘೋಷಿಸಿ ಸಂಬಂಧಿಸಿದವರಿಂದ/ ಸಾರ್ವಜನಿಕರಿಂದ/ ಆಸಕ್ತಿಯುಳ್ಳವರಿಂದ ಆಕ್ಷೇಪಣೆ/ ಸಲಹೆ ಹಾಗೂ ಮನವಿಗಳಿದ್ದಲ್ಲಿ 15 ದಿನಗಳಲ್ಲಿ ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು. ಇದಕ್ಕೆ ಸಂಬಂಧಿಸಿದಂತೆ (1) ಶ್ರೀ ಬಿ.ಎಸ್. ನಾರಾಯಣರಾವ್ ಬಿನ್ ಬಿ.ವಿ. ಸುಬ್ಬರಾವ್ (2) ಮೆ: ಚಂದ್ರಾ ಸ್ಪಿನ್ನಿಂಗ್ ಮತ್ತು ವಿವಿಂಗ್ ಮಿಲ್ಸ್ ಲಿಮಿಟೆಡ್‌ನ ಪ್ರತಿನಿಧಿ (3) ಮೆ: ವೆಂಕಟರಮಣನಗರ ಗ್ರೂಪ್ ಹೌಸಿಂಗ್ ಸೊಸೈಟಿ ಲಿಮಿಟೆಡ್ (4) ಶ್ರೀ ಜವರಯ್ಯ (5) ಶ್ರೀ ಎಸ್.ಎಂ. ಸುರೇಂದ್ರಕುಮಾರ್ ಬಿನ್ ಲೇಟ್ ಸಿ. ಮುನಿಯಪ್ಪ, ಶ್ರೀಮತಿ ರತ್ನಮ್ಮ, ಶ್ರೀ ಎಸ್.ಎಂ. ಚಂದ್ರಶೇಖರ್, ಶ್ರೀ ಎಸ್.ಎಂ. ಮುರಳಿ, ಶ್ರೀಮತಿ ಮಂಜುಳ, ಶ್ರೀಮತಿ ಶೋಭ, ಶ್ರೀಮತಿ ರೆಡ್ಡಿಲಕ್ಷ್ಮಿ, (6) ಶ್ರೀ ಬಿ.ಎಸ್. ನಾರಾಯಣರಾವ್, ಶ್ರೀಮತಿ ವೆಂಕಟಲಕ್ಷ್ಮಮ್ಮ ಕೋಂ ಎನ್.ಎಸ್. ರಾಜಗೋಪಾಲ್, ಶ್ರೀ ಆರ್. ಪ್ರಭಾಕರ್, ಶ್ರೀ ಆರ್. ಮೋಹನ್‌ಕುಮಾರ್, ಶ್ರೀ ಆರ್. ಕಾಶೀನಾಥ್, ಶ್ರೀ ಬಿ.ವಿ. ಪ್ರಮೋದ್, ಶ್ರೀ ವಿ. ರತ್ನಾಕರ್ ಇವರ ಜಿ.ಪಿ.ಎ. ವಿ. ಬಾಲಸುಬ್ರಮಣ್ಯ, ಐ. ಬಲವೇಂದರ್ ವೆಂಕಟ್, ಮುಂತಾದವರು ಆಕ್ಷೇಪಣೆ ಹಾಗೂ ಸಲಹೆಗಳನ್ನು ಸಲ್ಲಿಸಿರುತ್ತಾರೆ. ಮೇಲ್ಕಂಡ ಎಲ್ಲಾ ಆಕ್ಷೇಪಣೆಗಳನ್ನು ಕಡತ ಸಂಖ್ಯೆ: DOH 25 MCS 93 ರಲ್ಲಿ ವ್ಯವಹರಿಸಿದ್ದು, ಎಲ್ಲಾ ಆಕ್ಷೇಪಣೆಗಳನ್ನು ಪ್ರಧಾನ ಕಾರ್ಯದರ್ಶಿಯವರ ನ್ಯಾಯಾಲಯದಲ್ಲಿ ಖುದ್ದಾಗಿ ಪರಿಶೀಲಿಸಲಾಗಿದೆ. ಹಾಗೂ ಆಕ್ಷೇಪಣೆದಾರರ ಅಹವಾಲು ಹಾಗೂ ಮಂಡಳಿಯ ಅಧಿಕಾರಿಗಳ ಕೋರಿಕೆಯಂತೆ ಪ್ರಧಾನ ಕಾರ್ಯದರ್ಶಿಯವರು ದಿನಾಂಕ:11.12.2000 ರಂದು ಸ್ಥಳ ತನಿಖೆ ಮಾಡಿದ್ದು, ಸ್ಥಳತನಿಖೆ ವರದಿ ಹಾಗೂ ಆಕ್ಷೇಪಣೆದಾರರ ಮನವಿಗಳನ್ನು ಪರಿಶೀಲಿಸಿ ಅವರ ಮನವಿಗಳನ್ನು ವಜಾಗೊಳಿಸಿ ಸದರಿ ಜಮೀನಿನಲ್ಲಿರುವ ಕಾಲೇಜು ಕಟ್ಟಡವನ್ನು ಹೊರತುಪಡಿಸಿ ಭೂ ಸ್ವಾಧೀನ ಕೈಗೊಳ್ಳಲು ಸೂಕ್ತ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರದ ಆದೇಶ ಸಂಖ್ಯೆ: DOH 25 MCS 93, ದಿನಾಂಕ:13.03.2001ರಲ್ಲಿ ಆದೇಶಿಸಲಾಗಿದೆ.

ಸದರಿ ಪ್ರದೇಶವು ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಅಗತ್ಯವಿರುವುದರಿಂದ ನಿಯಮಾನುಸಾರ ಪರಿಹಾರವನ್ನು ಜಿಲ್ಲಾಧಿಕಾರಿಯವರು ನಿಗದಿಪಡಿಸುವರೆಂದು ಸೂಚಿಸಲಾಗಿದೆ. ಅದರಂತೆ ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸಲು ಹಾಗೂ ಆ ಪ್ರದೇಶದಲ್ಲಿ ಕೊಳಚೆ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸರ್ಕಾರವು ಮನಗಂಡಿರುವುದರಿಂದ ಷೆಡ್ಯೂಲ್‌ನಲ್ಲಿ ತಿಳಿಸಿರುವ 6.30 ಎಕರೆ ಪೈಕಿ ಆದರ್ಶ ಕಾಲೇಜು ಕಟ್ಟಡಕ್ಕೆ ಸೇರಿದ 1.34 ಗುಂಟೆ ಪ್ರದೇಶದ ಚೆಕ್ಕುಬಂದಿ ಉತ್ತರಕ್ಕೆ ಖಾಲಿ ಪ್ರದೇಶ ಸ್ವಾಧೀನಪಡಿಸಿಕೊಳ್ಳಲು ಪ್ರಸ್ತಾಪಿಸಿರುವ ಕರಿತಿಮ್ಮನಹಳ್ಳಿಯ ಮುನಿಸಿಪಲ್ ಸರ್ವೆ ನಂ.76, 77 ಮತ್ತು 78 ದಕ್ಷಿಣಕ್ಕೆ ಸರ್ವೆ ನಂ.64 ಮತ್ತು 65/2ರ ಕೊಳಚೆ ಪ್ರದೇಶ, ಪೂರ್ವಕ್ಕೆ ಖಾಸಗಿ ಕಟ್ಟಡ, ಪಶ್ಚಿಮಕ್ಕೆ ಸರ್ವೆ ನಂ.64 ಮತ್ತು 65/2 ಗವಿಪುರಂ ಸ್ಲಂನಲ್ಲಿ ಅನಧಿಕೃತ ಶೀಟಿನ ಮನೆ ಇದ್ದು, ಕಾಲೇಜು ಕಟ್ಟಡಕ್ಕೆ ಸೇರಿದ 1.34 ಗುಂಟೆ ಪ್ರದೇಶವನ್ನು ಹೊರತುಪಡಿಸಿ ಉಳಿದ ಕೊಳಚೆ ಪ್ರದೇಶಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲು ತೀರ್ಮಾನಿಸಿ ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 17ರನ್ವಯ ಜಮೀನನ್ನು ಅಂತಿಮವಾಗಿ ಭೂ ಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಘೋಷಿಸಲಾಗಿದೆ.

**ಷೆಡ್ಯೂಲ್**

| ಕೊಳಚೆ ಪ್ರದೇಶದ ಹೆಸರು ಮತ್ತು ಇರುವ ಸ್ಥಳ | ಭೂ ಮಾಲೀಕರ ಹೆಸರು | ಸರ್ವೆ ಪಿ.ಟಿ.ಎಸ್. ನಂ. | ವಿಸ್ತೀರ್ಣ ಎ–ಗುಂ. | ಚಕ್ಕುಬಂದಿ |
|---|---|---|---|---|
| | | **ಬ್ಲಾಕ್–ಎ** | | |
| ವೆಂಕಟರಮಣ ಗುಡಿಸಲು ಪ್ರದೇಶಕ್ಕೆ ಹೊಂದಿಕೊಂಡಿರುವ ಖಾಲಿ ಪ್ರದೇಶ, 5ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು–18. | ಶ್ರೀ ಬಿ.ಆರ್. ಮಾಧವ ಕೃಷ್ಣಯ್ಯಶೆಟ್ಟಿ | ಸಿಟಿ ಕಾರ್ಪೋರೇಷನ್ ನಂ.76,77 ಮತ್ತು 78 | 2–23 | ಪೂರ್ವಕ್ಕೆ: ಕನ್ಸರ್ವೆನ್ಸಿ ಲೈನ್<br>ಪಶ್ಚಿಮಕ್ಕೆ: ಸ.ನಂ.16 ಕರಿತಿಮ್ಮನಹಳ್ಳಿ<br>ಉತ್ತರಕ್ಕೆ:5ನೇ ಮುಖ್ಯರಸ್ತೆ, ಚಾಮರಾಜಪೇಟೆ<br>ದಕ್ಷಿಣಕ್ಕೆ: ಶ್ರೀಮತಿ ಸರಸ್ವತಮ್ಮ ರವರ ಕಟ್ಟಡ ಮತ್ತು ಗವಿಪುರ ಸ.ನಂ. 64 ಮತ್ತು 65/2 |
| | ಶ್ರೀ ಬಿ.ಎಸ್. ನಾರಾಯಣರಾವ್ ಮತ್ತು ಶ್ರೀ ಬಿ.ವಿ. ಸುಬ್ಬರಾವ್ | ಸ.ನಂ.64, ಗವಿಪುರ | 0–29 | ಪೂರ್ವಕ್ಕೆ: ಖಾಸಗಿ ಕಟ್ಟಡ (ಶ್ರೀಮತಿ ಸರಸ್ವತಮ್ಮರವರ ಕಟ್ಟಡ ಹೊರತುಪಡಿಸಿ)<br>ಪಶ್ಚಿಮಕ್ಕೆ: ಸ.ನಂ.65/2, ಗವಿಪುರ<br>ಉತ್ತರಕ್ಕೆ: ಶ್ರೀಮತಿ ಸರಸ್ವತಮ್ಮನವರು ಹಾಲಿ ಕಟ್ಟಡ ಮತ್ತು ಬಿ.ಸಿ.ಸಿ. ನಂ.76, 77, ಮತ್ತು 78.<br>ದಕ್ಷಿಣಕ್ಕೆ: ಸ.ನಂ.64ರಲ್ಲಿ ಇರುವ ಹಾಲಿ ಕೊಳಚೆ ಪ್ರದೇಶ, ಗವಿಪುರ. |
| | ಶ್ರೀ ಬಿ.ವಿ. ಸುಬ್ಬಾರಾವ್ | ಸ.ನಂ.65/2 ಗವಿಪುರ | 0–14 | ಪೂರ್ವಕ್ಕೆ: ಸ.ನಂ.64 ಗವಿಪುರ<br>ಪಶ್ಚಿಮಕ್ಕೆ:ಸ.ನಂ.65/2ರ ಉಳಿದ ಭಾಗ<br>ಉತ್ತರಕ್ಕೆ: ಬಿ.ಸಿ.ಸಿ. ನಂ.76,77 ಮತ್ತು 78 ಮತ್ತು ಸ.ನಂ.16 ಕರಿ ತಿಮ್ಮನಹಳ್ಳಿ<br>ದಕ್ಷಿಣಕ್ಕೆ: ಸ.ನಂ.66/2ರಲ್ಲಿರುವ ಹಾಲಿ ಕೊಳಚೆ ಪ್ರದೇಶ, ಗವಿಪುರ. |
| | ಮಾಲೀಕರ ಹೆಸರು ಗೊತ್ತಿಲ್ಲ | ಸ.ನಂ.16 ಕರಿತಿಮ್ಮನಹಳ್ಳಿ | 0–22 | ಪೂರ್ವಕ್ಕೆ: ಬಿ.ಸಿ.ಸಿ.ನಂ. 76, 77 ಮತ್ತು 78.<br>ಪಶ್ಚಿಮಕ್ಕೆ:ಸ.ನಂ.16, ಕರಿತಿಮ್ಮನಹಳ್ಳಿ ಇದರ ಉಳಿದ ಭಾಗ.<br>ಉತ್ತರಕ್ಕೆ: 5ನೇ ಮುಖ್ಯರಸ್ತೆ, ಚಾಮರಾಜಪೇಟೆ.<br>ದಕ್ಷಿಣಕ್ಕೆ: ಸ.ನಂ.65/2, ಗವಿಪುರ. |

| ಕೊಳಚೆ ಪ್ರದೇಶದ ಹೆಸರು ಮತ್ತು ಇರುವ ಸ್ಥಳ | ಭೂ ಮಾಲೀಕರ ಹೆಸರು | ಸರ್ವೆ ಪಿ.ಟಿ.ಎಸ್. ನಂ. | ವಿಸ್ತೀರ್ಣ ಎ–ಗುಂ. | ಚಕ್ಕುಬಂದಿ |
|---|---|---|---|---|
| | ಶ್ರೀ ಬಿ.ವಿ. ಸುಬ್ಬರಾವ್ | ಸ.ನಂ.64, ಗವಿಪುರ | 1–12 | ಪೂರ್ವಕ್ಕೆ: ಶ್ರೀಮತಿ ಚಿನ್ನಮ್ಮನವರ ಮನೆ, ಖಾಸಗಿ ಕಟ್ಟಡಗಳು ಮತ್ತು ಅಡ್ಡರಸ್ತೆಗಳು.<br>ಪಶ್ಚಿಮಕ್ಕೆ: ಸ.ನಂ.65/2, ಗವಿಪುರ.<br>ಉತ್ತರಕ್ಕೆ: ಸ.ನಂ.64ರಲ್ಲಿ ಹಾಲಿ ಇರುವ ಕೊಳಚೆ ಪ್ರದೇಶ, ಗವಿಪುರ.<br>ದಕ್ಷಿಣಕ್ಕೆ: ಸ.ನಂ.66/1 ಮತ್ತು 65/2 ಗವಿಪುರ. |
| | ಶ್ರೀ ಬಿ.ವಿ. ಸುಬ್ಬಾರಾವ್ | ಸ.ನಂ.65/2, ಗವಿಪುರ | 1–10 | ಪೂರ್ವಕ್ಕೆ: ಸ.ನಂ.64 ಮತ್ತು 66/1 ಗವಿಪುರ.<br>ಪಶ್ಚಿಮಕ್ಕೆ: ಸ.ನಂ.65/2 ಉಳಿದಭಾಗ, ಗವಿಪುರ.<br>ಉತ್ತರಕ್ಕೆ: ಸ.ನಂ.65/2 ಮತ್ತು 64ರಲ್ಲಿ ಹಾಲಿ ಇರುವ ಕೊಳಚೆ ಪ್ರದೇಶ, ಗವಿಪುರ.<br>ದಕ್ಷಿಣಕ್ಕೆ: ಸ.ನಂ.65/1 ಗವಿಪುರ. |
| | **ಒಟ್ಟು** | | **6–30** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1026

**ಹೆಚ್. ಹನುಮಂತಯ್ಯ**

ಪೀಠಾಧಿಕಾರಿ–1, ವಸತಿ ಇಲಾಖೆ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ**

**ಸಂಖ್ಯೆ: ಎ3–ಸಿಓಎನ್–ಸಿಆರ್–5/2008–09, ದಿನಾಂಕ:27ನೇ ಆಗಸ್ಟ್, 2008**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಕೆಳಕಂಡ ವಾಹನವನ್ನು ವಲಯ ಅರಣ್ಯಾಧಿಕಾರಿ, ಭದ್ರಾವತಿ ವಲಯದ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್–71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

| ಕ್ರ. ಸಂ. | ಮೊಕದ್ದಮೆ ಸಂಖ್ಯೆ | ವಾಹನಗಳ ವಿವರ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ವಲಯ ಅರಣ್ಯಾಧಿಕಾರಿ, ಭದ್ರಾವತಿ ಅ.ಮೊ.ಸಂಖ್ಯೆ:72/2008–09, ದಿನಾಂಕ:25.08.2008. | ಟಾಟಾ ಸುಮೊ ವಾಹನ ಸಂಖ್ಯೆ: ಕೆಎ–14–ಎ–1199 | ಇಂಜಿನ್ ನಂ. 497SP28ATZ802007 | 421058ATZ90 2586 |

ಈ ಮೇಲ್ಕಂಡ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಈ ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ಈ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಎಸ್. ವೆಂಕಟೇಸನ್**

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ**

**ಸಂಖ್ಯೆ: ಎ3–ಸಿಓಎನ್–ಸಿಆರ್–6/2008–09, ದಿನಾಂಕ:29ನೇ ಆಗಸ್ಟ್, 2008**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಕೆಳಕಂಡ ವಾಹನವನ್ನು ವಲಯ ಅರಣ್ಯಾಧಿಕಾರಿ, ಉಂಬ್ಳೇಬೈಲು ವಲಯದ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್–71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

| ಕ್ರ. ಸಂ. | ಮೊಕದ್ದಮೆ ಸಂಖ್ಯೆ | ವಾಹನಗಳ ವಿವರ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ವಲಯ ಅರಣ್ಯಾಧಿಕಾರಿ, ಉಂಬ್ಳೇಬೈಲು ಅರಣ್ಯ ಮೊಕದ್ದಮೆ ನಂ.32/2008–09, ದಿನಾಂಕ:24.08.2008. | ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ಸಂಖ್ಯೆ:ಕೆಎ–14–ಜೆ–2796 | ಇಂಜಿನ್ ನಂ. E.09QE-544219 | C4QE-545354 |

ಈ ಮೇಲ್ಕಂಡ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಈ ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ಈ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಎಸ್. ವೆಂಕಟೇಸನ್**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.1028

**DEPARTMENT OF COMMERCIAL TAXES**

**OFFICE OF THE COMMISSIONER OF COMMERCIAL TAXES IN KARNATAKA, GANDHINAGAR, BANGALORE**

**NOTIFICATION**

**No. KSA.CR.76/ 2008-09, Bangalore, Dated:28th July, 2008**

In exercise of the powers under sub-section (1) of Section 18-A of the Karnataka Value Added Tax Act, 2003, it is specified with effect from the 1st day of August, 2008, that a dealer registered under the said Act purchasing iron and steel, hardware, timber, plywood, veneers, particle board, laminated sheets, panel boards and similar articles of wood for use in the execution of civil work contracts, from another dealer registered under the said Act, shall deduct tax at source as specified under the said Section.

**B.A. HARISH GOWDA**
Commissioner of Commercial Taxes
in Karnataka, Bangalore.

PR-931

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'extra virgin olive oil'.

**Ref:** Application Dated:06.03.2008 of M/s Amrutanjan Health Care Limited, No.83, B-Street, Anandarao Extension, Gandhinagar, 6th Cross, Bangalore-560 009.

In its application Dated:24.06.2008 cited above, M/s Amrutanjan Health Care Limited, No.83, B-Street, Anandarao Extension, Gandhinagar, 6th Cross, Bangalore-560 009 has sought clarification regarding the rate of tax applicable on 'extra virgin olive oil'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.346/07-08, Dated:29th July, 2008**

It is hereby clarified that 'extra virgin olive oil' is taxable at 4% under serial No.31 of the Third Schedule to the Karnataka Value Added Tax Act, 2003.

**B.A. HARISH GOWDA**

PR-932 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'Granite Stone pieces' (known as jelly in kannada word)'.

**Ref:** Application Dated:14.03.2008 of M/s Nagadevi Stone Crusher, R.G. Apartments, Adarsh Nagar, Malur-563130.

In his application Dated:24.06.2008 cited above, M/s Nagadevi Stone Crusher, R.G. Apartments, Adarsh Nagar, Malur-563130 has sought clarification regarding the rate of tax applicable on 'Granite Stone pieces' (known as jelly in kannada word)'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.356/07-08, Dated:29th July, 2008**

It is hereby clarified that:

(i) Crushed granite stone pieces are taxable at 4% as per entry sl.no.83 of the Third Schedule to the Karnataka Value Added Tax Act, 2003.

(ii) Further, as per entry at clause 3 of the notification No.FD 116 CSL 2006(13), Dated:31.03.2006, the amount payable by a dealer running a mechanized crushing unit producing granite metals opting to pay tax under composition scheme under sub-section (1) of Section 15 of the Karnataka Value Added Tax Act, 2003, is as follows:

| Sl. No. | Capacity | Rates |
|---|---|---|
| 1. | For each mechanized crushing machine of size exceeding 16"x9" | Rs.16,500/- per month |
| 2. | For each mechanized crushing machine of size exceeding 12"x9" | Rs.8,250/- per month |
| 3. | For each crushing machine of size upto 12"x9" | Rs.4,000/- per month |

**B.A. HARISH GOWDA**
PR-933 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable to 'Bread rusk or toast' in different sizes and shapes with different Brand names (URD), 'Butter (round shape rusk) moisture removed from small buns', 'Potato buns', 'Bread sandwich'.

**Ref:** Application Dated:26.06.2008 of M/s Yashoda Nutritions, Plot No.136 (Part), Survey No.90, Tarihal Industrial Area, Tarihal, Hubli-580 026.

In its application Dated:26.06.2008 cited above, M/s Yashoda Nutritions, Plot No.136 (Part), Survey No.90, Tarihal Industrial Area, Tarihal, Hubli-580 026 has sought clarification regarding the rate of tax applicable on 'Bread rusk or toast' in different sizes and shapes with different Brand names (URD), 'Butter (round shape rusk) moisture removed from small buns', 'Potato buns', 'Bread sandwich'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.69/08-09, Dated:5th August, 2008**

It is hereby clarified that the rates of tax applicable in the following goods are as under:

| Sl. No. | Commodity | Rate of tax/ Section |
|---|---|---|
| 1. | Bread rusk and bun rusk in different sizes and shapes with unregistered brand names. | Exempted under entry sl.no.12 of the First Schedule to the Karnataka Value Added Tax Act, 2003. |
| 2. | Bread sandwich and Potato buns. | Taxable at 12.5% as per Section 4(1)(b) of the Karnataka Value Added Tax Act, 2003. |

**B.A. HARISH GOWDA**
PR-963 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'Masala Powder'.

**Ref:** Application Dated:24.06.2008 of M/s Eastern Condiments Private Ltd., No.16/4, Nagawara Main Road, Nagavara, Bangalore-560 045.

In its application Dated:24.06.2008 cited above, M/s Eastern Condiments Private Ltd., No.16/4, Nagawara Main Road, Nagavara, Bangalore-560 045 has sought clarification regarding the rate of tax applicable on 'Masala Powder'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.68/08-09, Dated:29th July, 2008**

It is hereby clarified that the rates of tax applicable in the following goods are as under:

| Sl. No. | Commodity | Rate of tax/ Section |
|---|---|---|
| 1. | Spices in the form of masala powder being the mixture of one or more spices. | Taxable at 4% as per Notification No.FD 140 CSL 06, Dated:19.12.2006. |
| 2. | Other masala powders | Taxable at 12.5% as per Section 4(1) (b) of the Karnataka Value Added Tax Act, 2003. |

**B.A. HARISH GOWDA**
Commissioner of Commercial Taxes,
(Karnataka), Bangalore.

PR-964

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'baby diapers'.

**Ref:** Application Dated:07.07.2008 of Sri A.R. Valisha Shakeel, Partner of Chetan & Gurunath, Chartered Accountants, # 979, 19th Main, 13th Cross, BSK 2nd Stage, Bangalore-560 070 through M/s Bella Premier Happy Hygiene Products Private Limited, No.59/1, Ground Floor, Cockburn Road, Bangalore-560 001 TIN 29820201030.

In his application cited above, Sri A.R. Valisha Shakeel, Partner of Chetan & Gurunath, Chartered Accountants, # 979, 19th Main, 13th Cross, BSK 2nd Stage, Bangalore-560 070 through a registered dealer M/s Bella Premier Happy Hygiene Products Private Limited, No.59/1, Ground Floor, Cockburn Road, Bangalore-560 001 TIN 29820201030 has sought clarification regarding the rate of tax applicable on 'baby diapers'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.79/08-09, Dated:5th August, 2008**

It is hereby clarified that 'baby diapers' are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

PR-965

Commissioner of Commercial Taxes,
(Karnataka), Bangalore.

**PROCEEDINGS OF THE ASSISTANT COMMISSIONER OF COMMERCIAL TAXES LOCAL VAT OFFICE-075, BANGALORE DATED: 26TH AUGUST, 2008**

**PRESENT:** C.R. MANJUNATH
Assistant Commissioner of Commercial Taxes (LVO-075)

**Sub:** Loss of 'C' Form in case of M/s Shekar Agencies, Bangalore.

**Read:** Letter Dated:15.07.2008 of M/s Shekar Agencies, Bangalore.

**Preamble:**

M/s Shekar Agencies, No.73, Rajgopalnagar Main Road, Peenya 2nd Stage, Bangalore-58 is a registered dealer borne on the files of this office bearing TIN-29750209944. The company in its letter cited at read above has intimated that the following 'C' Form No.3699209 issued by the department, is lost in transit.

The company has produced the proof for having filed the complaint to police authorities for loss of above 'C' Form and executed Indemnity Bond in favour of the Government as laid down Rule 12(2) and 12(9) of CST Act, 1956.

Since the 'C' Form No.3699209 is stated to be lost in transit, the Form so lost is treated as Invalid. Hence, this order.

**Order No.ACCT/ LVO.075/2008-09, Dated:26th August, 2008**

In view of the circumstances explained above the 'C' Form No.3699209 is treated as invalid with immediate effect.

Assistant Commissioner of
Commercial Taxes
LVO-075, Peenya, Bangalore-58.

**OFFICE OF THE ASST., COMMISSIONER OF COMMERCIAL TAXES, LVO-075, BANGALORE**

**Notified Authority Under the Rule 6(i) of the CST (Karnataka) Rules 1957**

**NOTIFICATION**

**No. ACCT/LVO-075/08-09, Dated:26th August, 2008**

By virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-C described below is declared to be obsolete and Invalid.

| Sl. No. | Number (including code No.) of declaration Forms Lost destroyed or stolen | Name & address of the dealer to whom declaration Forms is/are issued by the department with date of C form issue | Registration certificate No. Of the dealer under CST Act 1956 | The address of the dealer to whom the declaration is/ are sent | Date of issue of Form/ s by the dealer | Whether Lost/ Stolen/ destroyed | Remarks |
|---|---|---|---|---|---|---|---|
| 1. | C Form No.3699209 | Shekar Agencies 73, Rajgopalnagar Main Road, II Stage Peenya, Bangalore-58. | 29750209944 | Castrol India Ltd | 27.04.07 | Lost | 18,27,091/- |

Assistant Commissioner of
Commercial Taxes
LVO-075, Peenya, Bangalore-58.

PR-1024

**PROCEEDINGS OF THE ASSISTANT COMMISSIONER OF COMMERCIAL TAXES LOCAL VAT OFFICE-075, BANGALORE DATED: 26TH AUGUST, 2008**

**PRESENT:** C.R. MANJUNATH

Assistant Commissioner of Commercial Taxes (LVO-075)

**Sub:** Loss of 'C' Form in case of M/s UPT Fabrication Pvt Ltd., Bangalore.

**Read:** Letter Dated:29.07.2008 of M/s UPT Fabrication Pvt Ltd., Bangalore.

**Preamble:**

M/s UPT Fabrication Pvt Ltd., A291, 6th Main, 2nd Stage Peenya Industrial Area, Bangalore-58 is a registered dealer borne on the files of this office bearing TIN-29850453262. The company in its letter cited at read above has intimated that the following 'C' Form Nos.3609022 to 3609025 (4 nos.) issued by the department, is lost in transit.

The company has produced the proof for having filed the complaint to police authorities for loss of above 'C' Form and executed Indemnity Bond in favour of the Government as laid down Rule 12(2) and 12(9) of CST Act, 1956.

Since the 'C' Form No.3609022 to 3609025 (4 nos.) is stated to be lost in transit, the Form so lost is treated as Invalid. Hence, this order.

**Order No. ACCT/ LVO.075/2008-09, Dated:26th August, 2008**

In view of the circumstances explained above the 'C' Form Nos.3609022 to 3609025 (4 nos.) is treated as invalid with immediate effect.

Assistant Commissioner of
Commercial Taxes
LVO-075, Peenya, Bangalore-58.

**OFFICE OF THE ASST., COMMISSIONER OF COMMERCIAL TAXES, LVO-075, BANGALORE**

**Notified Authority Under the Rule 6(i) of the CST (Karnataka) Rules 1957**

**NOTIFICATION**

**No. ACCT/LVO-075/08-09, Dated:26th August, 2008**

By virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-C described below is declared to be obsolete and Invalid.

| Sl. No. | Number (including code No.) of declaration Forms Lost destroyed or stolen | Name & address of the dealer to whom declaration Forms is/are issued by the department with date of C form issue | Registration certificate No. Of the dealer under CST Act 1956 | The address of the dealer to whom the declaration is/ are sent | Date of issue of Form/ s by the dealer | Whether Lost/ Stolen/ destroyed | Remarks |
|---|---|---|---|---|---|---|---|
| 1. | C Form Nos. 3609022 to 3609025 | UPT Fabrication Pvt Ltd., No.A291, 6th Main, II Stage, PIA, Bangalore-58. | 29850453262 | - | - | Lost | Blank Forms |

Assistant Commissioner of
Commercial Taxes
LVO-075, Peenya, Bangalore-58.

PR-1025

**ಆರ್ಥಿಕ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಆಇ 40 ಸಉಲಾ 2008, ಬೆಂಗಳೂರು, ದಿನಾಂಕ:22ನೇ ಆಗಸ್ಟ್, 2008**

**ವಿಷಯ:** ದಿನಾಂಕ:01.01.2007ರಲ್ಲಿದ್ದಂತೆ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಆಇ 50 ಸಉಲಾ 2006, ದಿನಾಂಕ:11.09.2006.

2) ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಸಉಸಿ (3) 14/ 2001–02, ದಿನಾಂಕ:20.01.2007, 27.07.2007 & 31.01.2007.

3) ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಆಇ 40 ಸಉಲಾ 2008, ದಿನಾಂಕ:01.04.2008.

4) ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರ ಪತ್ರಸಂಖ್ಯೆ: ಸಉಸಿ (3) 14/ 2001–02, ದಿನಾಂಕ:10.06.2008.

ಮೇಲೆ ಉಲ್ಲೇಖ (1)ರಲ್ಲಿ ನಮೂದಿಸಿದ ಅಧಿಕೃತ ಜ್ಞಾಪನದಲ್ಲಿ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿ ದಿನಾಂಕ:01.01.2006ರಲ್ಲಿದ್ದಂತೆ ಸಹಾಯಕ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಚುರಪಡಿಸಲಾಗಿದೆ.

ಮೇಲೆ ಉಲ್ಲೇಖ (2)ರಲ್ಲಿ ನಮೂದಿಸಿದ ಪತ್ರಗಳಲ್ಲಿ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ, ನಿರ್ದೇಶಕರು, ದಿನಾಂಕ:01.01.2007ರಲ್ಲಿ ಇರುವಂತೆ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ ಹಾಗೂ ಆ ಪ್ರಕಾರ ಪರಿಶೀಲಿಸಿ ಮೇಲೆ ಉಲ್ಲೇಖ (3)ರಲ್ಲಿ ನಮೂದಿಸಿದ ಅಧಿಕೃತ ಜ್ಞಾಪನದಲ್ಲಿ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಿಸಿದ್ದು, ಈ ಕುರಿತು ಆಕ್ಷೇಪಣೆಗಳೇನಾದರೂ ಇದ್ದಲ್ಲಿ 30 ದಿನಗಳ ಒಳಗೆ ಸಲ್ಲಿಸಲು ಸೂಚಿಸಲಾಗಿತ್ತು.

ಮೇಲೆ (4)ರಲ್ಲಿ ನಮೂದಿಸಿದ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರ ದಿನಾಂಕ:10.06.2008ರ ಪತ್ರದಲ್ಲಿ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಬಗ್ಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲವೆಂದು ತಿಳಿಸಿ ದಿನಾಂಕ:01.01.2007ರಲ್ಲಿದ್ದಂತೆ ಸಹಾಯಕ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಕೋರಿದ್ದಾರೆ.

ಯಾವುದೇ ಸಹಾಯಕ ನಿರ್ದೇಶಕರುಗಳಿಂದ ಆಕ್ಷೇಪಣೆಗಳು ಬಾರದ ಕಾರಣ ದಿನಾಂಕ:01.01.2007ರಲ್ಲಿದ್ದಂತೆ ಸಹಾಯಕ ನಿರ್ದೇಶಕರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿ ಪ್ರಕಟಿಸಲಾಗಿದೆ.

**ಎನ್. ಶ್ರೀನಿವಾಸ ಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**ಅನುಬಂಧ**

**ದಿನಾಂಕ:01.01.2007ರಲ್ಲಿದ್ದಂತೆ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಸಹಾಯಕ ನಿರ್ದೇಶಕರುಗಳ ವೃಂದದ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ:ಶ್ರೀಮತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1. | ಜಿ.ಎಂ. ಶೆಡೋಳೆ | 25.09.1952 | 25.11.1977 | 11.12.1988 | 11.12.1988 |
| 2. | ಪಿ. ದೇವೇಂದ್ರಸ್ವಾಮಿ | 08.09.1951 | 05.11.1981 | 01.04.1990 | 01.04.1990 |
| 3. | ಸಿ.ಕೃಷ್ಣಪ್ಪ | 09.06.1955 | 01.10.1981 | 01.04.1990 | 01.04.1990 |
| 4. | ಮಹಮದ್ ಫಜಲುಲ್ಲಾ | 18.05.1949 | 05.12.1983 | 01.06.1992 | 01.06.1992 |
| 5. | ಹೆಚ್. ರುದ್ರಪ್ಪ | 01.06.1954 | 27.03.1984 | 01.06.1992 | 01.06.1992 |
| 6. | ಟಿ. ಪುಟ್ಟಸ್ವಾಮಿ | 01.05.1954 | 01.12.1983 | 28.05.1992 | 28.05.1992 |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ:ಶ್ರೀಮತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 7. | ಮಹದೇವ ಮಡಿವಾಳ | 01.04.1953 | 11.07.1985 | 17.11.1992 | 16.11.1992 |
| 8. | ಎನ್. ರಂಗಯ್ಯ | 29.09.1962 | 02.09.1985 | 11.07.1993 | 11.07.1993 |
| 9. | ಶಂಕರ್ ಭೀ. ನಾಯಕವಾಡಿ | 20.05.1958 | 30.03.1984 | 04.08.1995 | 04.08.1995 |
| 10. | ಶಿವಾನಂದ | 18.05.1955 | 03.04.1984 | 04.08.1995 | 04.08.1995 |
| 11. | ಕೆ. ಸಿದ್ಧಪ್ಪ | 07.10.1956 | 26.03.1984 | 04.12.1995 | 04.12.1995 |
| 12. | ಎಂ.ಕೆ. ಹೆಗಡೆ | 14.06.1959 | 03.04.1984 | 04.12.1995 | 04.12.1995 |
| 13. | ಎಂ.ಬಿ. ಸಿದ್ಧರಾಜು | 08.05.1952 | 30.09.1985 | 20.12.1995 | 04.12.1995 |
| 14. | ಎಸ್.ಆರ್. ದುಂಡಗಿ | 20.07.1961 | 30.03.1984 | 03.08.2001 | 02.08.2001 |
| 15. | ಎಸ್. ಶ್ರೀನಿವಾಸಯ್ಯ | 10.04.1954 | 04.04.1984 | 02.08.2001 | 02.08.2001 |
| 16. | ಕೆ. ಸುಲೋಚನ | 12.07.1957 | 29.03.1984 | 03.08.2001 | 02.08.2001 |
| 17. | ಎಂ.ಎಸ್. ಪಾಟೀಲ್ | 20.07.1956 | 26.03.1984 | 03.08.2001 | 02.08.2001 |
| 18. | ಬಿ. ಶಂಕರಗೊಲ್ಲ (*) | 08.08.1949 | 26.03.1984 | 03.08.2001 | 02.08.2001 |
| 19. | ಪಿ. ಕಲಾವತಿ | 22.10.1964 | 02.09.1985 | 04.08.2001 | 02.08.2001 |
| 20. | ಎಂ.ಎ. ಮೂಡಲಗಿ | 01.06.1960 | 04.09.1985 | 03.08.2001 | 02.08.2001 |
| 21. | ಕೆ.ಆರ್. ನಾಗೇಂದ್ರ ರಾವ್ | 28.04.1960 | 09.09.1985 | 09.08.2001 | 02.08.2001 |
| 22. | ಭೀಮಪ್ಪ | 01.01.1957 | 09.09.1985 | 17.09.2004 | 02.08.2001 |
| 23. | ಚಂದ್ರೇಗೌಡ | 18.07.1961 | 04.09.1985 | 03.08.2001 | 02.08.2001 |
| 24. | ಸಿ. ಪುಟ್ಟರಾಜು | 25.06.1960 | 25.09.1985 | 03.08.2001 | 02.08.2001 |
| 25. | ಬಿ. ಜಯಪ್ಪ | 03.06.1962 | 24.11.1988 | 03.08.2001 | 02.08.2001 |
| 26. | ಬಿ.ಜಿ. ಮಲ್ಲೇದೇವರು | 08.06.1954 | 05.09.1985 | 20.09.2001 | 13.09.2001 |
| 27. | ಜರೀನಾ ಎಂ. ಶೇಖ್ | 28.05.1954 | 06.09.1985 | 20.09.2001 | 13.09.2001 |
| 28. | ನಾಡಗಿರಿ ಶಂಕರ್ ಆರ್. | 19.07.1961 | 25.11.1988 | 18.09.2001 | 13.09.2001 |
| 29. | ಪಿ. ಲಿಂಗಪ್ಪ | 25.12.1954 | 02.09.1985 | 15.10.2004 | 03.09.2004 |

**ಎನ್. ಶ್ರೀನಿವಾಸ ಮೂರ್ತಿ,**

ಪಿ.ಆರ್.1027

ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

## ಕಾನೂನು ಮಾಪನಶಾಸ್ತ್ರ ಇಲಾಖೆ

## ಕಾನೂನು ಮಾಪನಶಾಸ್ತ್ರ ನಿಯಂತ್ರಕರು, ಬೆಂಗಳೂರು ರವರ ನಡವಳಿಗಳು

**ವಿಷಯ:** ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರು, ಕೇಂದ್ರ ಪ್ರಯೋಗಶಾಲೆ, ಬೆಂಗಳೂರು ಇವರಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುವ ದೇವನಹಳ್ಳಿಯಲ್ಲಿ ನಿರ್ಮಾಣಗೊಂಡಿರುವ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿರುವ ಫ್ಲೋ ಮೀಟರ್ ಇತ್ಯಾದಿಗಳ ಸತ್ಯಾಪನೆ ಕಾರ್ಯನಿರ್ವಹಿಸುವ ಬಗ್ಗೆ.

**ಓದಲಾಗಿದೆ:** 1) ಕೇಂದ್ರ ಕಛೇರಿಯ ಪತ್ರದ ಸಂಖ್ಯೆ: ಸಿಎಲ್ಎಂ. ಎಸಿಟಿ/ ಆರ್.ಎಸ್/ ಸಿಆರ್-52/04-95, ದಿನಾಂಕ:16.07.2004.

2) ಅ.ಸ.ಪ.ಸಂ. ಕಾಮಾಸನಿ. ಕೇಪ್ರಶಾ 196.07.2008, ದಿನಾಂಕ:18.02.2008.

**ಪ್ರಸ್ತಾವನೆ:**

ಉಲ್ಲೇಖಿತ ಪತ್ರ-1 ರಲ್ಲಿ ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರು, ಕೇಂದ್ರ ಪ್ರಯೋಗ ಶಾಲೆ, ಬೆಂಗಳೂರು ಇವರಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬರುವ ದೇವನಗುಂದಿಗೆ ಒಳಪಡುವ ತೈಲ ಕಂಪನಿಗಳ ಸ್ಟೋರೇಜ್ ಟ್ಯಾಂಕ್ಸ್, ವ್ಯಾಟ್ಸ್ ವೋವರ್ ಹೆಡ್ ಮೆಸರ್ಸ್, ಪ್ರೋವಿಂಗ್ ಮೆಸರ್ಸ್, ಬಲ್ಕ್ ಮೀಟರ್ಸ್‌ಗಳ ಸತ್ಯಾಪನೆ ಕಾರ್ಯಗಳನ್ನು ಮಾಡುತ್ತಿದ್ದು ಉಲ್ಲೇಖಿತ ಪತ್ರ-2ರಲ್ಲಿ ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರು, ಕೇಂದ್ರ ಪ್ರಯೋಗ ಶಾಲೆ, ಬೆಂಗಳೂರು ಇವರು ದಿನಾಂಕ:28.03.2008ರಿಂದ ದೇವನಹಳ್ಳಿಯಲ್ಲಿ ನಿರ್ಮಾಣಗೊಂಡಿರುವ

ಅಂತರ್‌ರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಮೇಲೆ ತಿಳಿಸಲಾಗಿರುವ ಸತ್ಯಾಪನ ಕಾರ್ಯವನ್ನು ನಿರ್ವಹಿಸಬೇಕಾಗಿರುವುದರಿಂದ ದೇವನಹಳ್ಳಿಯಲ್ಲಿರುವ ಅಂತರ್ ರಾಷ್ಟ್ರೀಯ ವಿಮಾನ ನಿಲ್ದಾಣದ ಕ್ಷೇತ್ರವ್ಯಾಪ್ತಿಯನ್ನು ನೀಡಲು ಕೋರಿರುವುದನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಕಾಮಾಇ/ ಕ್ಷೇ.ವ್ಯಾ/ ಸಿಆರ್–8/ 2007–08, ದಿನಾಂಕ:23ನೇ ಫೆಬ್ರವರಿ, 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರವಾಗಿ ತಿಳಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಕಾನೂನು ಮಾಪನಶಾಸ್ತ್ರ ಇಲಾಖೆಯ ನಿಯಂತ್ರಕನಾದ ಶ್ರೀ ಪ್ರಕಾಶ್ ಆದ ನಾನು ಪ್ರಮಾಣಬದ್ಧ ತೂಕಗಳು ಮತ್ತು ಅಳತೆಗಳು (ಅಮಲುಜಾರಿ) ಕಾಯಿದೆ 1985ರ ಕಲಂ 5(3) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರು, ಕೇಂದ್ರ ಪ್ರಯೋಗ ಶಾಲೆ, ಬೆಂಗಳೂರು ಇವರಿಗೆ ಉಲ್ಲೇಖಿತ ಪತ್ರ–1ರಲ್ಲಿ ಈಗಾಗಲೇ ವಹಿಸಲಾಗಿರುವ ಸತ್ಯಾಪನೆ ಕಾರ್ಯದ ಜೊತೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿಯ ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿರುವ ಸ್ಟೋರೇಜ್ ಟ್ಯಾಂಕ್ಸ್, ವೋವರ್ ಹೆಡ್ ಮೆಸರ್ಸ್, ಪ್ರೋವಿಂಗ್ ಮೆಸರ್ಸ್ ಬಲ್ಕ್ ಮೀಟರ್ಸ್‌ಗಳ ಸತ್ಯಾಪನೆ ಕಾರ್ಯಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ವಹಿಸಲಾಗಿದೆ.

ಪಿ.ಆರ್.286 ಕಾನೂನು ಮಾಪನಶಾಸ್ತ್ರ ನಿಯಂತ್ರಕರು.

**ಸಹಕಾರಿಗಳ ನಿಬಂಧಕರು, ಕರ್ನಾಟಕ ರಾಜ್ಯ ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: ಆರ್‌ಸಿಎಸ್: ಡಿಐಎಸ್:ಡಿ–1: ಸೌ:53: 2007–08**

| **ಅರ್ಜಿದಾರರು** | **ವಿರುದ್ಧ** | **ಎದುರು ಅರ್ಜಿದಾರರು** |
|---|---|---|
| ವ್ಯವಸ್ಥಾಪಕರು,<br>ಕಾಳಿದಾಸ ಪಟ್ಟಣ ಕ್ರೆಡಿಟ್ ಸೌಹಾರ್ದ, ಕೋ–ಆಪರೇಟಿವ್ ನಿ. ನಂ.548, ಶ್ರೀ ಉಮೇಶ್ ಲಕ್ಷ್ಮಣ ಗಲ್ಲಿ, ದೂರದರ್ಶನ ನಗರ, ಬೆಳಗಾಂ. | | 1) ಶ್ರೀ ಸದಾಶಿವ ರಾಮಪ್ಪ ಲಂಗೋಟಿ, ಮಾಲೀಕರು ಓಂ ಸಾಯಿ ಇಂಜಿನೀಯರಿಂಗ್ ವರ್ಕ್ಸ್ ಮತ್ತು ಫೆಬ್ರಿಕೇಷನ್, ಹಾಲಿ ವಾಸ, ಶಿರಗುರ್ (ಹಲಸಿರಗುರ್) ಶಿರಗುರ್ ಅಂಚೆ, ರಾಯಭಾಗ್ ತಾ: ಬೆಳಗಾಂ ಜಿಲ್ಲೆ.<br>2) ಶ್ರೀ ಮೋಹನ್ ಭೀಮರಾವ್ ಘೋರ್ಪಡೆ, ಹಾಲಿ ವಾಸ: ನಂ.492, ಕಂಗಲಿ, ಕೆ.ಹೆಚ್. ಬೆಳಗಾಂ.<br>3) ಶ್ರೀ ಶಂಕರ್ ಗಂಗಾರಾಮ ಫಾಳಿ, ಹಾಲಿ ವಾಸ: ಶಿರಗುರ್ (ಹಲಸಿರಗುರ್), ಶಿರಗುರ್ ಅಂಚೆ, ರಾಯಬಾಗ್ ತಾ: ಬೆಳಗಾಂ ಜಿಲ್ಲೆ. |

**ಕರ್ನಾಟಕ ಸೌಹಾರ್ದ ಸಹಕಾರಿಗಳ ಕಾಯ್ದೆ 1997 ರ ಕಲಂ 44 ರಂತೆ ಆದೇಶ**

ಮೇಲ್ಕಂಡ ಅರ್ಜಿದಾರರು ಎದುರು ಅರ್ಜಿದಾರರ ವಿರುದ್ಧ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997ರ ಕಲಂ 39 ರನ್ವಯ ರೂ.2,26,012/– ಮತ್ತು ಬಡ್ಡಿ ಇತರೆ ಖರ್ಚುಗಳ ಸಮೇತ, ಹಣ ವಸೂಲಿಗೆ ವಿವಾದ ಅರ್ಜಿಯನ್ನು ಹೂಡಿರುತ್ತಾರೆ. ಸದರಿ ವ್ಯಾಜ್ಯದ ಅರ್ಜಿಯೊಂದಿಗೆ ಮಧ್ಯಂತರ ಪರಿಹಾರ ಅರ್ಜಿ ಕಲಂ 44(1)ರಂತೆ ಎದುರು ಅರ್ಜಿದಾರರ ಚರಾಸ್ತಿಗಳನ್ನು ಈ ನ್ಯಾಯಾಲಯದ ಆದೇಶದ ಮುನ್ನ ಜಪ್ತಿ ಮಾಡಿಕೊಳ್ಳಲು ನ್ಯಾಯಾಲಯದಲ್ಲಿ ಮಧ್ಯಂತರ ಪರಿಹಾರದ ಆದೇಶ ಕೋರಿ, ಐ.ಎ. ಅರ್ಜಿಯನ್ನು ದಾಖಲು ಮಾಡಿದ್ದರು.

ಸದರಿ ಅರ್ಜಿದಾರರ ಮಧ್ಯಂತರ ಪರಿಹಾರದ ಅರ್ಜಿಯನ್ನು ಪುರಸ್ಕರಿಸಿ, ಎದುರು ಅರ್ಜಿದಾರರ ವಶದಲ್ಲಿರುವ ಚರಾಸ್ತಿಗಳನ್ನು ಈ ವ್ಯಾಜ್ಯದ ಆದೇಶದ ಮುನ್ನ ಜಪ್ತಿ ಮಾಡಿಕೊಂಡು ದಿನಾಂಕ:13.12.2007 ರಂದು ಆದೇಶ ಹೊರಡಿಸಿ, ಎದುರು ಅರ್ಜಿದಾರರಿಂದ ವ್ಯಾಜ್ಯದ ಬೇಡಿಕೆ ಮೊತ್ತಕ್ಕೆ ಸೂಕ್ತ ಭದ್ರತೆಯನ್ನು ನಿಗದಿತ ಅವಧಿಯೊಳಗೆ ನ್ಯಾಯಾಲಯಕ್ಕೆ ಹಾಜರುಪಡಿಸಲು ನಿರ್ದೇಶಿಸಿ, ನೋಟೀಸ್ ಜಾರಿಗೊಳಿಸಿದೆ. ಆದರೆ ಎದುರು ಅರ್ಜಿದಾರರು ನ್ಯಾಯಾಲಯಕ್ಕೆ ಯಾವುದೇ ಸೂಕ್ತ ಭದ್ರತೆಯನ್ನು ನೀಡಲು ವಿಫಲರಾಗಿರುತ್ತಾರೆ. ಅರ್ಜಿದಾರರ ವಕೀಲರು ಸಹ ದಿನಾಂಕ:18.01.2008 ರಂದು ನಡೆದ ವಿಚಾರಣೆಯಲ್ಲಿ ಜ್ಞಾಪನ ಪತ್ರ ದಾಖಲು ಮಾಡಿ, ಎದುರು ಅರ್ಜಿದಾರರ ಜಪ್ತಿ ಮಾಡಿಕೊಂಡಿರುವ ಚರಾಸ್ತಿಗಳನ್ನು ಸ್ಥಿರೀಕರಿಸಲು ವಿನಂತಿಸಿರುತ್ತಾರೆ. ಆದಕಾರಣ, ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿ ಕೆಳಕಂಡ ಆದೇಶ ನೀಡಿದೆ.

**ಆದೇಶ**

ಅರ್ಜಿದಾರರು ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997ರ ಕಲಂ 44(1)ರಂತೆ ದಾಖಲು ಮಾಡಿರುವ ಅರ್ಜಿಯನ್ನು ಪುರಸ್ಕರಿಸಿದೆ. ಈ ನ್ಯಾಯಾಲಯದಿಂದ ವ್ಯಾಜ್ಯದ ಬೇಡಿಕೆ ಮೊತ್ತಕ್ಕೆ ಡಿಕ್ರಿ ಆದೇಶ ನೀಡುವ ಮುನ್ನ ಎದುರು ಅರ್ಜಿದಾರರ ಚರಾಸ್ತಿಗಳನ್ನು ಜಪ್ತಿ ಮಾಡಿಕೊಂಡು ದಿನಾಂಕ:18.12.2007 ರಂದು ಆದೇಶ ಹೊರಡಿಸಿದ್ದ ಮತ್ತು ಈ ಆದೇಶಕ್ಕೆ ಅನುಬಂಧದಲ್ಲಿ ಲಗತ್ತಿಸಿರುವ ಎದುರು ಅರ್ಜಿದಾರರ ಚರಾಸ್ತಿಗಳನ್ನು ಸದರಿ ಕಾಯ್ದೆಯ ಕಲಂ 44(2) ರಂತೆ ಸ್ಥಿರೀಕರಿಸಿದೆ.

ಈ ಆದೇಶವನ್ನು ದಿನಾಂಕ:11.02.2003 ರಂದು ನನ್ನ ಸ್ವಸಹಿ ಮತ್ತು ನ್ಯಾಯಾಲಯದ ಮೊಹರಿನೊಂದಿಗೆ ನೀಡಲಾಗಿದೆ.

ಸಹಕಾರಿಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

**ದಾವಾ ಸಂಖ್ಯೆ: ಆರ್‌ಸಿಎಸ್: ಡಿಐಎಸ್: ಡಿ1:ಸೌ:58: 2007–08ರ ಕರ್ನಾಟಕ ಸೌಹಾರ್ದ ಸಹಕಾರಿಗಳ ಕಾಯ್ದೆ 1997ರ ಕಲಂ 44(2) ರನ್ವಯ ಆದೇಶಕ್ಕೆ**

**ಅನುಬಂಧ**

**ವ್ಯಾಜ್ಯದ ಅರ್ಜಿ ಇತ್ಯರ್ಥದ ಆದೇಶ ಪೂರ್ವದಲ್ಲಿ ಎದುರು ಅರ್ಜಿದಾರರ ಚರಾಸ್ತಿ ಉಪಕರಣಗಳನ್ನು ಜಪ್ತಿ ಮಾಡಿಕೊಂಡು ಮುಟ್ಟುಗೋಲು ಹಾಕಿಕೊಂಡಿರುವ ಚರಾಸ್ತಿಗಳ ವಿವರ:**

| Sl. No. | Particulars | Date | Value | Invoice No. |
|---|---|---|---|---|
| 1. | 1 Qty. 9' JMT Heavy duty lathe machine purchased from Amit Machine Tools and Accessories, Belgaum. | 05.01.2007 | Rs.1,30,000/- | 615 |
| 2. | 1 Qty 3 H.P. III phase Motor. | 05.01.2007 | Rs.6,975/- | 553 |
| 3. | 1 Qty. $5^1/_4$ Sukun Lathe Machine purchased from Amit Machine Tools and Accessories, Belgaum | 05.01.2007 | Rs.67,600/- | 616 |
| | **Total** | | **Rs.2,04,575** | |

ಸಹಕಾರಿಗಳ ನಿಬಂಧಕರು,
ಪಿ.ಆರ್.205 ಕರ್ನಾಟಕ ರಾಜ್ಯ, ಬೆಂಗಳೂರು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀಮತಿ ಡಿ.ಎನ್. ಉಕ್ಕುಂಡ, ಕಿಮಆಸ. ಇವರ ಅನಧಿಕೃತ ಗೈರು ಹಾಜರಿ ಸಂಬಂಧ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ:** 1) ನಿರ್ದೇಶನಾಲಯದ ಪತ್ರ ಸಮ ಸಂಖ್ಯೆ: ದಿನಾಂಕ:03.02.2003.
2) ನಿರ್ದೇಶನಾಲಯದ, ಪತ್ರ ಸಮ ಸಂ: ದಿನಾಂಕ:31.12.2003.
3) ವಿಚಾರಣಾ ಅಧಿಕಾರಿಯವರ ವಿಚಾರಣಾ ವರದಿ ಸಂ: ಮುಜಾಅ: ಜಾಕೋ: ಎಸ್‌ಟಿ:66: 03–04, ದಿನಾಂಕ:04.03.2005.
4) ನಿರ್ದೇಶನಾಲಯದ ಪತ್ರ ಸಮ ಸಂ: ದಿನಾಂಕ:30.03.2005 ಮತ್ತು 02.05.2007.
5) ಜಿಲ್ಲಾ ಆಕುಕ ಅಧಿಕಾರಿ, ಗದಗ್, ಇವರ ಪತ್ರ ಸಂ: ವಿಚಾರಣೆ:12:53: 07–08, ದಿನಾಂಕ:19.12.2007.

**ಪ್ರಸ್ತಾವನೆ:**

ಶ್ರೀಮತಿ: ಡಿ.ಎನ್. ಉಕ್ಕುಂಡ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ಪ್ರಾಥಮಿಕ ಆರೋಗ್ಯ ಕೇಂದ್ರ, ಡಂಬಳ, (ಉಪಕೇಂದ್ರ, ವೆಂಕಟಾಪುರ) ಮುಂಡರಗಿ ತಾಲ್ಲೂಕು, ಗದಗ್ ಜಿಲ್ಲೆ, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:18.05.1979 ರಿಂದ ಈವರೆವಿಗೂ ಸರ್ಕಾರದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿರುವ ಬಗ್ಗೆ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ದೋಷಾರೋಪಣೆಯನ್ನು ಜಾರಿ ಮಾಡಿ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಆದರೆ ನೌಕರರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಆದರೆ ದಾಖಲೆಯಲ್ಲಿರುವ ವಿಷಯ ಸಾಮಗ್ರಿಗಳಿಂದ ನೌಕರರು ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಜಾಗೃತ ಅಧಿಕಾರಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಯಿತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಸದರಿ ವಿಚಾರಣಾ ವರದಿಯನ್ನು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಆರೋಪಿತ ನೌಕರರಿಗೆ ಜಾರಿ ಮಾಡಿ ಲಿಖಿತ ಹೇಳಿಕೆಯನ್ನು ಪಡೆದು ಸಲ್ಲಿಸುವಂತೆ ತಿಳಿಸಿದ್ದು, ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾ ವರದಿಯನ್ನು ಆರೋಪಿತ ನೌಕರರಿಗೆ ಜಾರಿ ಮಾಡಿದ್ದು, ಈವರೆವಿಗೂ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾ ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಿದ್ದು, ಆರೋಪಿತ ನೌಕರರು ಈವರೆವಿಗೂ ಸರ್ಕಾರದ ಕರ್ತವ್ಯಕ್ಕೆ ಹಾಜರಾಗದೆ ಇರುವುದರಿಂದ ಸರ್ಕಾರದ ಕೆಲಸಕ್ಕೆ ತೊಂದರೆಯಾಗುತ್ತಿರುವುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಡಿಪಿಎನ್.(13) ಸಿಆರ್:50:01-02, ಬೆಂಗಳೂರು, ದಿನಾಂಕ:12ನೇ ಫೆಬ್ರವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಡಾ: ಬಿ.ಎಸ್. ಪ್ರೇಮಲೀಲ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಇದೇ ನಿಯಮಾವಳಿಯ ನಿಯಮ 8(8) ರನ್ವಯ ಶ್ರೀಮತಿ: ಡಿ.ಎನ್. ಉಕ್ಕುಂಡ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಡಂಬಳು, ಉಪಕೇಂದ್ರ, ವೆಂಕಟಾಪುರ, ಮುಂಡರಗಿ ತಾ: ಗದಗ್ ಜಿಲ್ಲೆ, ಇವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ವಜಾ ಮಾಡಿರುತ್ತೇನೆ.

**ಡಾ: ಬಿ.ಎಸ್. ಪ್ರೇಮಲೀಲ**
ಪಿ.ಆರ್.209 ನಿರ್ದೇಶಕರು,
ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ ನಿ., ಕೊಂಡಜ್ಜಿ, ತುರುವೇಕೆರೆ ತಾಲ್ಲೂಕು, ಇದರ ಮಾಜಿ ವ್ಯವಸ್ಥಾಪಕರಾದ ಎಲ್.ಎನ್. ಪಾರ್ಥಸಾರಥಿ ಇವರ ವಿರುದ್ಧ ದಾಖಲಾಗಿದ್ದ ಅಧಿಭಾರ ಅರ್ಜಿ ಸಂಖ್ಯೆ: 5/2000-01ರ ತೀರ್ಪು ಮುನ್ನ ಕಲಂ 103ರ ಅಡಿಯಲ್ಲಿ ಜಪ್ತಿ ಆಜ್ಞೆ ಹೊರಡಿಸಿರುವುದನ್ನು ಹಿಂದಕ್ಕೆ ಪಡೆಯುವ ಕುರಿತು.

**ಉಲ್ಲೇಖ:** 1) ಈ ಕಛೇರಿಯ ಕಲಂ 103ರ ಜಪ್ತಿ ಆದೇಶದ ಸಂಖ್ಯೆ: ಸ.ನಿ.34/ ಡಿ.ಡಿ.ಎಸ್./ ಕಲಂ103/64/2001-02 ದಿನಾಂಕ:22.10.2001.

2) ಶ್ರೀ ಎಲ್.ಎನ್. ಪಾರ್ಥಸಾರಥಿ ಯವರ ಮನವಿ ಪತ್ರದ ದಿನಾಂಕ:23.11.2007.

**ಪ್ರಸ್ತಾವನೆ:**

ಶ್ರೀ ಎಲ್.ಎನ್. ಪಾರ್ಥಸಾರಥಿ ಇವರು ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ ನಿ., ಕೊಂಡಜ್ಜಿ, ಇಲ್ಲಿ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ರೂ.1,63,448-95 ಗಳನ್ನು ದುರುಪಯೋಗಪಡಿಸಿಕೊಂಡಿರುವುದು 1995-96 ರಿಂದ 1998-99ನೇ ಸಾಲುಗಳ ಆಡಿಟ್ ವರದಿಯಲ್ಲಿ ಬೆಳಕಿಗೆ ಬಂದಿದ್ದು, ಸದರಿಯವರು ದುರುಪಯೋಗಪಡಿಸಿಕೊಂಡಿದ್ದ ಹಣವನ್ನು ಮರುಪಾವತಿಸದೇ ಇರುವುದರಿಂದ ಸದರಿಯವರ ವಿರುದ್ಧ ಸಹಕಾರ ಸಂಘಗಳ ಕಾಯಿದೆ ಕಲಂ 69ರ ಅಡಿಯಲ್ಲಿ ಅಧಿಭಾರ ಅರ್ಜಿ ದಾಖಲಾಗಿದ್ದು, ಅರ್ಜಿ ಸಂಖ್ಯೆ:5/2000-01ರಂತೆ ದಾಖಲಾಗಿ ಪ್ರಕರಣದ ತೀರ್ಪಿಗೆ ಮುನ್ನ ಎಲ್.ಎನ್. ಪಾರ್ಥಸಾರಥಿಯವರ ಸ್ಥಿರಾಸ್ತಿಗಳನ್ನು ಸಹಕಾರ ಸಂಘಗಳ ಕಾಯಿದೆ ಕಲಂ 103ರಡಿಯಲ್ಲಿ ತೀರ್ಪು ಮುನ್ನ ಜಪ್ತಿಗೊಳಿಸಿ ಉಲ್ಲೇಖಿತದಲ್ಲಿ ಆದೇಶ ಹೊರಡಿಸಲಾಗಿತ್ತು.

ಶ್ರೀ ಎಲ್.ಎನ್. ಪಾರ್ಥಸಾರಥಿಯವರು ಬ್ಯಾಂಕಿನಲ್ಲಿ ದುರುಪಯೋಗಪಡಿಸಿಕೊಂಡಿರುವ ಹಣವನ್ನು ಮರುಪಾವತಿಸಿರುವುದಾಗಿ ವರದಿ ಮಾಡುತ್ತಾ ಉಲ್ಲೇಖಿತ (1)ರಲ್ಲಿ ಹೊರಡಿಸಿರುವ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ವಾಪಸ್ಸು ಪಡೆದು ಜಪ್ತಿ ಆದೇಶಕ್ಕೆ ಒಳಪಟ್ಟಿರುವ ಸ್ಥಿರಾಸ್ತಿಯನ್ನು ಬಿಡುಗಡೆ ಮಾಡಿಕೊಡುವಂತೆ ಕೋರಿರುತ್ತಾರೆ. ದುರುಪಯೋಗಪಡಿಸಿಕೊಂಡಿರುವ ಹಣವನ್ನು ಮರುಪಾವತಿಸಿರುವ ಬಗ್ಗೆ ಬ್ಯಾಂಕಿನ ಹಾಲಿ ವ್ಯವಸ್ಥಾಪಕರು ದಿನಾಂಕ:05.06.2006ರಂದು ದುರುಪಯೋಗದ ಹಣ ಪೂರ್ತಿ ತೀರುವಳಿಯಾಗಿರುವುದಾಗಿಯೂ ಮತ್ತು ಈ ಬಾಬ್ತು ಬಾಕಿ ಇರುವುದಿಲ್ಲವೆಂದು ನೀಡಿರುವ ಲಿಖಿತ ಪತ್ರದಿಂದ ದುರುಪಯೋಗದ ಹಣ ವಸೂಲಿಯಾಗಿರುವುದು ದೃಢಪಟ್ಟಿರುತ್ತದೆ.

ಆದ್ದರಿಂದ ಉಲ್ಲೇಖ (1)ರಲ್ಲಿ ಜಪ್ತಿಗೊಳಿಸಿ ಹೊರಡಿಸಿದ ಜಪ್ತಿ ಆಜ್ಞೆಯನ್ನು ವಾಪಸ್ಸು ಪಡೆದು ಈ ಕೆಳಕಂಡ ಸ್ಥಿರಾಸ್ತಿಗಳನ್ನು ಬಿಡುಗಡೆಗೊಳಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ: ಸನಿ 34/ ಡಿಡಿಎಸ್/ ಕಲಂ 103/ 64/ 2000-01, ದಿನಾಂಕ:29ನೇ ನವೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಶ್ರೀ ಎಲ್.ಎನ್. ಪಾರ್ಥಸಾರಥಿ ಇವರ ಈ ಕೆಳಕಂಡ ಸ್ಥಿರಾಸ್ತಿಗಳನ್ನು ಈ ಕಛೇರಿಯ ಆದೇಶ ಸಂಖ್ಯೆ: ಸನಿ 34/ ಡಿಡಿಎಸ್/ ಕಲಂ 103/ 64/ 2000-01 ದಿನಾಂಕ:22.10.2001ರಂದು ಜಪ್ತಿಗೊಳಿಸಿ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆದೇಶವನ್ನು ವಾಪಸ್ಸು ಪಡೆದು ಸ್ಥಿರಾಸ್ತಿಗಳನ್ನು ಜಪ್ತಿ ಆಜ್ಞೆಯಿಂದ ವಿಮುಕ್ತಗೊಳಿಸಿ ಬಿಡುಗಡೆ ಮಾಡಿ ಆದೇಶಿಸಿದೆ.

ಜಪ್ತಿ ಆಜ್ಞೆಯಿಂದ ಬಿಡುಗಡೆಗೊಳಿಸಿದ ಸ್ಥಿರಾಸ್ತಿಗಳ ವಿವರ

| ಕ್ರ. ಸಂ. | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಹೋಬಳಿ/ ತಾಲ್ಲೂಕು | ಸರ್ವೆ ನಂ. | ವಿಸ್ತೀರ್ಣ ಎ–ಗುಂ | ತರಹೆ |
|---|---|---|---|---|---|---|
| 1. | ಎಲ್.ಎನ್. ಪಾರ್ಥಸಾರಥಿ | ಕೊಂಡಜ್ಜಿ | ದಂಡಿನಶಿವರ ತುರುವೇಕೆರೆ ತಾಲ್ಲೂಕು | 393/3 | 0–28$^1/_2$ | ತೆಂಗು |
| 2. | ಎಲ್.ಎನ್. ಪಾರ್ಥಸಾರಥಿ | ಕೊಂಡಜ್ಜಿ | ದಂಡಿನಶಿವರ ತುರುವೇಕೆರೆ ತಾಲ್ಲೂಕು | 148/ಪಿ48 | 0–25 | ಖುಷ್ಕಿ |
| 3. | ಎಲ್.ಎನ್. ಪಾರ್ಥಸಾರಥಿ | ಕೊಂಡಜ್ಜಿ | ದಂಡಿನಶಿವರ ತುರುವೇಕೆರೆ ತಾಲ್ಲೂಕು | 148/ಪಿ47 | 1–25 | ಖುಷ್ಕಿ |

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:29.11.2007 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ಪಿ.ಆರ್.155 ತಿಪಟೂರು ಉಪವಿಭಾಗ, ತಿಪಟೂರು.

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 254 ಮುಸೇವಿ 2004, ಬೆಂಗಳೂರು, ದಿನಾಂಕ:14ನೇ ಮಾರ್ಚ್, 2008**

**ವಿಷಯ:** ಧಾರ್ಮಿಕ ದತ್ತಿ ಇಲಾಖೆಯ ಮೈಸೂರಿನ ಮಹಾರಾಜ ಸರ್ಕಾರಿ ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರು (ತಂತ್ರಸಾರಾಗಮ) ಹುದ್ದೆಯ ನೇಮಕಾತಿ ಮಾಡುವ ಆದೇಶ.

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರುರವರ ಪತ್ರ ಸಂಖ್ಯೆ:ಆರ್(1) 39/ 2006–07 ಪಿಎಸ್‌ಸಿ ದಿನಾಂಕ:21.06.2006.

ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಕವಾದ ಈ ಕೆಳಕಂಡ ಅಭ್ಯರ್ಥಿಯನ್ನು ಧಾರ್ಮಿಕ ದತ್ತಿ ಇಲಾಖೆಯ, ಮೈಸೂರಿನ ಮಹಾರಾಜ ಸರ್ಕಾರಿ ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರು (ತಂತ್ರಸಾರಾಗಮ) ಹುದ್ದೆಗೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿ ಮೇರೆಗೆ (ವೇತನ ಶ್ರೇಣಿ ರೂ.14050–25050) ನೇಮಕಾತಿ ಮಾಡಲಾಗಿದೆ.

| ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ |
|---|---|
| 1. | ಶ್ರೀ ರಾಜಗೋಪಾಲ, ಉಪಾಧ್ಯಾಯ ಕೆ. ಲಕ್ಷ್ಮೀನಿವಾಸ ಕುಟ್ಯಾರು, ಬ್ರಿಡ್ಜ್ ಹತ್ತಿರ, ಇಂದ್ರಪುರ ಪೋಸ್ಟ್ ಶಿರ್ವ, ಮಂಚಕಲ್ಲು, ಉಡುಪಿ. |

ಸದರಿ ನೇಮಕಾತಿಯು ಈ ಕೆಳಗಿನ ಷರತ್ತುಗಳಿಗೊಳಪಟ್ಟಿರುತ್ತದೆ.

1) ಈ ನೇಮಕಾತಿ ತಾತ್ಕಾಲಿಕವಾಗಿದ್ದು, ಆಗಿಂದಾಗ್ಗೆ ವಿಧಿಸುವ ಸೇವಾ ಷರತ್ತುಗಳಿಗೆ ಒಳಪಟ್ಟಿರುತ್ತದೆ.

2) ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ಹಾಗೂ ನಡತೆಗೆ ಸಂಬಂಧಿಸಿದ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರಿಗೆ ಸಲ್ಲಿಸತಕ್ಕದ್ದು.

3) ಕರ್ನಾಟಕ ಸೇವಾ (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಗಳ (1974)ರ ಅಡಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆ ಹಾಗೂ ಇತರೆ ಪರೀಕ್ಷೆಗಳಲ್ಲಿ ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣರಾಗತಕ್ಕದ್ದು:

4) ಇವರ ಸೇವಾ ಜ್ಯೇಷ್ಠತೆಯು ಪ್ರಸ್ತುತ ಕರ್ನಾಟಕ ಲೋಕಸೇವಾ ಆಯೋಗದ ಆಯಾಯ ವಿಷಯದಲ್ಲಿ ನಿರ್ಧರಿಸಿದಂತೆ ಇರತಕ್ಕದ್ದು, ನಂತರ ಕರ್ನಾಟಕ ಲೋಕಸೇವಾ ಆಯೋಗವು ಕ್ರೋಢೀಕೃತ ಜ್ಯೇಷ್ಠತಾ ಪಟ್ಟಿಯಲ್ಲಿ ನಿಗಧಿಪಡಿಸಿದಂತೆ ಹಾಗೂ ತದನಂತರ ಹಾಗೂ ಸರ್ಕಾರ ಹೊರಡಿಸುವ ಅಧಿಸೂಚನೆಯಲ್ಲಿ ಇರತಕ್ಕದ್ದು:

5) ಇವರ ನೇಮಕಾತಿಯು ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಛ ನ್ಯಾಯಾಲಯದಲ್ಲಿನ ರಿಟ್ ಅಪೀಲು (ಸಿವಿಲ್) ಸಂಖ್ಯೆ: 232/ 99ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ:

6) ಇವರು ಸ್ಥಳನಿಯುಕ್ತಿ ಆದೇಶವನ್ನು ಸ್ವೀಕರಿಸಿದ 15 ದಿನಗಳಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ರಾಮಚಂದ್ರಯ್ಯ**

ಪಿ.ಆರ್.332 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ–ಉಪ–ವಿಭಾಗ, ಮಧುಗಿರಿ ಇವರ ನ್ಯಾಯಾಲಯದ ನಡವಳಿಕೆಗಳು

**ವಿಷಯ:** ತುಮಕೂರು ಜಿಲ್ಲೆ ಶಿರಾ ಟೌನ್‌ನಲ್ಲಿರುವ ಸಲಾಮತೆ ಪತ್ತಿನ ಸಹಕಾರ ಸಂಘ ನಿ., ಶಿರಾ ಇದರಲ್ಲಿ ನಡೆದಿರುವ ಹಣ ದುರುಪಯೋಗದ ಬಗ್ಗೆ ಅನ್ಸರ್‌ಪಾಷಾ ಕಾರ್ಯದರ್ಶಿ ಮತ್ತು ಅಬ್ದುಲ್ ರಫೀಕ್ ನಗದು ಗುಮಾಸ್ತ ಇವರ ಹೆಸರಿನಲ್ಲಿ ಮತ್ತು ಅವರ ಕಾನೂನು ವಾರಸುದಾರರಾದ ತಂದೆ, ತಾಯಿ ಮತ್ತು ಸಹೋದರರ ಹೆಸರಿನಲ್ಲಿ ಜಂಟಿಯಲ್ಲಿರುವ ಸ್ಥಿರಾಸ್ತಿಗಳನ್ನು ಸಹಕಾರಿ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ಮಾಡುವ ಬಗ್ಗೆ.

**ಉಲ್ಲೇಖ:** 1) ಅಧ್ಯಕ್ಷರು ಸಲಾಮತ್ ಪತ್ತಿನ ಸಹಕಾರ ಸಂಘ ನಿ., ಶಿರಾ ಇವರ ಪ್ರಸ್ತಾವೆ ಪತ್ರದ ದಿನಾಂಕ:14.01.2008.

2) ದಿನಾಂಕ:23.01.2008ರಂದು ಈ ನ್ಯಾಯಾಲಯದಲ್ಲಿ ದಾಖಲಾಗಿರುವ (1) ಅಧಿಭಾರ ಅರ್ಜಿ ಸಂಖ್ಯೆ 11: 2007–08 (2) ಅಧಿಭಾರ ಅರ್ಜಿ ಸಂಖ್ಯೆ: 12: 2007–08 ಮತ್ತು (3) ಅಧಿಭಾರ ಅರ್ಜಿ ಸಂಖ್ಯೆ:13: 2007–08.

**ಪ್ರಸ್ತಾವನೆ:**

ಶ್ರೀ ಅಸ್ಲಂಪಾಷಾ ರವರು ಪಿಗ್ಮಿ ಏಜೆಂಟರಾಗಿ ದಿನಾಂಕ:10.05.2002 ರಿಂದ ಈ ತಹಲ್‌ವರೆವಿಗೂ, ಶ್ರೀ ಮೊಹ್ಮದ್ ಅಕ್ಬರ್ ರವರು ಪಿಗ್ಮಿ ಏಜೆಂಟರಾಗಿ ದಿನಾಂಕ:01.05.1999 ರಿಂದ ಈ ತಹಲ್‌ವರೆಗೂ ಮತ್ತು ಶ್ರೀ ಜಬೀಉಲ್ಲಾ ರವರು ಪಿಗ್ಮಿ ಏಜೆಂಟರಾಗಿ ದಿನಾಂಕ:27.11.1998 ರಿಂದ ಈ ತಹಲ್ ವರೆವಿಗೂ ಸಲಾಮತ್ ಪತ್ತಿನ ಸಹಕಾರ ಸಂಘ ನಿ., ಶಿರಾ ಇದರಲ್ಲಿ ಕೆಲಸ ನಿರ್ವಹಿಸುತ್ತಿರುತ್ತಾರೆ. ಇನ್ನು ಮುಂದೆ ಅರ್ಜಿದಾರ ಸಂಘವೆಂದು ಕರೆಯಲ್ಪಡುತ್ತದೆ. ಈ ಮೂರು ಪಿಗ್ಮಿ ಸಂಗ್ರಹಣಕಾರರು ಕ್ರಮವಾಗಿ ರೂ.1733796.00, ರೂ.1396159.00 ಮತ್ತು ರೂ.365937.00 ಜುಮ್ಲಾ ರೂ.34958892.00 ಸದರಿ ಅರ್ಜಿದಾರ ಸಂಘದ ಹಣವನ್ನು ದುರುಪಯೋಗ ಮಾಡಿರುತ್ತಾರೆ. ಸಂಘವು ಚೇತರಿಸಿಕೊಳ್ಳಬೇಕಾದರೆ ಈ ಹಣದ ದುರುಪಯೋಗದ ಜೊತೆಗೆ ಕ್ರಮವಾಗಿ ರೂ.874320.00, ರೂ.611060.00 ಮತ್ತು ರೂ.193421.00 ಜುಮ್ಲಾ ರೂ.1678801.00 ಬಡ್ಡಿ ಆಕರಣೆ ಮಾಡಿ ವಸೂಲು ಮಾಡಲು ಆಡಿಟರ್‌ರವರು ಅಸೆಸ್ ಮಾಡಿರುತ್ತಾರೆ. ಈ ವಿವರ ಅರ್ಜಿದಾರ ಸಂಘದ 2003–04 ರಿಂದ 2006–07ನೇ ಸಾಲುಗಳ ಲೆಕ್ಕ ವಿವರವನ್ನು ಆಡಿಟ್ ಮಾಡಿರುವ ಲೆಕ್ಕ ಪರಿಶೋಧನಾ ವರದಿಯಿಂದ ಕಂಡುಬಂದಿದೆ.

ಶ್ರೀ ಅನ್ಸರ್ ಪಾಷಾ ರವರು ಅರ್ಜಿದಾರ ಸಂಘದಲ್ಲಿ ಕಾರ್ಯದರ್ಶಿಯಾಗಿ ದಿನಾಂಕ:01.01.1999 ರಿಂದ ಈ ತಹಲ್ ವರೆವಿಗೂ ಕೆಲಸ ಮಾಡುತ್ತಿರುತ್ತಾರೆ. ಇವರು ಸಂಘದ ಉಪನಿಯಮ 57ರ ಪ್ರಕಾರ ಕಾರ್ಯ ನಿರ್ವಹಿಸಲು ಕರಾರು ಪತ್ರ ಬರೆದುಕೊಟ್ಟು ಆ ಪ್ರಕಾರ ಕಾರ್ಯ ನಿರ್ವಹಿಸಲು ವಿಫಲರಾಗಿರುತ್ತಾರೆ. ಇವರು ಸಂಘದ ಜವಾಬ್ದಾರಿ ಸ್ಥಾನದಲ್ಲಿದ್ದು ಪ್ರತಿ ದಿನದ ಪಿಗ್ಮಿ ವ್ಯವಹಾರವನ್ನು ಪರಿಶೀಲಿಸಿ ದೃಢೀಕರಿಸಿರುವುದಿಲ್ಲ ಜೊತೆಗೆ ಏಜೆಂಟರೊಂದಿಗೆ ಷಾಮಿಲಾಗಿ ಪಿಗ್ಮಿ ಹಣ ದುರುಪಯೋಗದಲ್ಲಿ ಬಾಗಿಯಾಗಿರುವ ಕಾರಣ ಸದರಿ ಮೊತ್ತಗಳಿಗೆ ಎರಡನೇ ಪ್ರತಿವಾದಿಯವರು ಸಹ ಹೊಣೆಗಾರರಾಗಿರುತ್ತಾರೆ.

ಶ್ರೀ ಅಬ್ದುಲ್ ರಫೀಕ್ ರವರು ಅರ್ಜಿದಾರ ಸಂಘದಲ್ಲಿ ನಗದು ಗುಮಾಸ್ತರಾಗಿದ್ದು ಪಿಗ್ಮಿ ಹಣ ಸಂಗ್ರಹಕ್ಕೆ ಸಂಬಂಧಿಸಿದ ಲೆಕ್ಕ ಪುಸ್ತಕಗಳ ನಿರ್ವಹಣೆ ಮಾಡುತ್ತಿದ್ದು ಪಿಗ್ಮಿ ಏಜೆಂಟ್‌ರವರು ಸಂಗ್ರಹಿಸಿದ ಹಣವನ್ನು ಪಿಗ್ಮಿ ದಿನವಹಿ ಪುಸ್ತಕದಲ್ಲಿ ನಮೂದಿಸಿರುತ್ತಾರೆ. ಆದರೆ ನಗದು ಮತ್ತು ದಿನವಹಿ ಪುಸ್ತಕದಲ್ಲಿ ನಮೂದು ಇವುಗಳ ನಡುವೆ ವ್ಯತ್ಯಾಸವಿರುತ್ತದೆ. ತಾಳೆ ಮಾಡಿರುವುದಲ್ಲಿ ಮತ್ತು ಮೊತ್ತವನ್ನು ಪೆನ್ಸಿಲ್‌ನಲ್ಲಿ ಬರೆದು ಅಷ್ಟನ್ನು ಮಾತ್ರ ಸಂಘಕ್ಕೆ ಜಮಾ ಮಾಡಿದ್ದು ಸಂಘಕ್ಕೆ ಹಾನಿ ಉಂಟು ಮಾಡಿರುತ್ತಾರೆ. ಈ ರೀತಿ ಸಂಗ್ರಹಿಸಿದ ಪಿಗ್ಮಿ ಹಣವನ್ನು ಮೋಸ ಮತ್ತು ವಂಚನೆಯಿಂದ ದುರುಪಯೋಗ ಪಡಿಸಿಕೊಂಡಿದ್ದಾರೆ. ಕಾರಣ ಇವರು ಸಹ ಷಾಮಿಲಾಗಿರುವುದರಿಂದ ಇವರು ಸಹ ಜವಾಬ್ದಾರರು ಮತ್ತು ಹೊಣೆಗಾರರಾಗಿರುತ್ತಾರೆ. ಆದುದರಿಂದ ಇವರನ್ನು 3ನೇ ಪ್ರತಿವಾದಿಯನ್ನಾಗಿ ಮೂರು ಅಧಿಭಾರ ಅರ್ಜಿಗಳಲ್ಲಿಯೂ ಅರ್ಜಿದಾರ ಸಂಘವು ಮಾಡಿರುತ್ತದೆ.

ಈ ರೀತಿಯ ಹಣದ ವಸೂಲಾತಿಗೆ ಸಂಘದ ಅಧ್ಯಕ್ಷರು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅಡಿ ಅರ್ಜಿ ಮತ್ತು ಕಲಂ 69ರ ಅಡಿಯಲ್ಲಿ ಮೂರು ಅಧಿಭಾರ ಅರ್ಜಿ ದಾವೆಗಳನ್ನು ಕ್ರಮವಾಗಿ ದಿನಾಂಕ:14.01.2008 ಮತ್ತು 23.01.2008ರಂದು ಅರ್ಜಿ ಮತ್ತು ದಾವೆಗಳನ್ನು ಸಲ್ಲಿಸಿರುತ್ತಾರೆ. ಈ 3 ದಾವೆಗಳನ್ನು ದಿನಾಂಕ:24.01.2008ರಂದು ಕಡತದ

ಮೇಲೆ ತೆಗೆದುಕೊಂಡು ದಿನಾಂಕ:18.02.2008 ರಿಂದ ವಿಚಾರಣೆ ಪ್ರಾರಂಭಿಸಲು ಆರೋಪ ಸಹಿತದ ನೋಟೀಸನ್ನು ಸಿದ್ದಪಡಿಸಿರುತ್ತದೆ. ಅರ್ಜಿದಾರ ಸಂಘವು ಉಲ್ಲೇಖ (1)ರ ಪತ್ರದಲ್ಲಿ ಹಾಗೂ ದಾವೆಗಳಲ್ಲಿ ಮನವಿ ಮಾಡಿ ಪ್ರತಿವಾದಿಗಳು ದುರುಪಯೋಗಪಡಿಸಿದ ಹಣ ರೂ.3495892.00 ಮತ್ತು ಬಡ್ಡಿ 1678801.00 ಗಳ ವಸೂಲಿ ಕುರಿತು ಹಣದ ಭದ್ರತೆಗಾಗಿ ದಾವೆಯ ಅಂತಿಮ ಫಲಿತಾಂಶವನ್ನು ಕಾಯ್ದಿರಿಸಿ ಸದರಿ ಪ್ರತಿವಾದಿಗಳು ಎರಡು ಮತ್ತು ಮೂರು ರವರ ಹೆಸರಿನಲ್ಲಿ ಮತ್ತು ಅವರ ಹಕ್ಕುಬದ್ಧ ಕಾನೂನು ವಾರಸುದಾರರಾದ ತಂದೆ, ತಾಯಿ ಮತ್ತು ಸಹೋದರರ ಹೆಸರಿನಲ್ಲಿರುವ ಜಂಟಿ ಇರುವ ಸ್ಥಿರಾಸ್ತಿಗಳು ಹಾಗೂ ಚರಾಸ್ತಿಗಳನ್ನು ಸಹಕಾರಿ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ನೀಡಬೇಕಾಗಿ ಕೋರಿರುತ್ತಾರೆ. ಆದುದರಿಂದ ಈ ನ್ಯಾಯಾಲಯದಲ್ಲಿ ವಿಚಾರಣೆಗಾಗಿರುವ ಅಧಿಭಾರ ಅರ್ಜಿ ಸಂಖ್ಯೆ: 11, 12 ಮತ್ತು 13/2007–08 ಗಳಲ್ಲಿನ ಅಂತಿಮ ತೀರ್ಪು ಕಾಯ್ದಿರಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಈ ನ್ಯಾಯಾಲಯದಲ್ಲಿರುವ ದಾವೆಗಳ ತೀರ್ಪು ಪೂರ್ವ ಈ ಕೆಳಕಂಡ ಷೆಡ್ಯೂಲ್ ಆಸ್ತಿಗಳನ್ನು ಜಪ್ತಿ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಜಪ್ತಿ ಆದೇಶ**

**ನಂ.ಸ.ಸಂ.ಸ.ನಿ.33: ಎಬಿಎನ್: ಡಿಡಿಎಸ್:105/ 2007–08, ದಿನಾಂಕ:24ನೇ ಜನವರಿ, 2008**

ಕರ್ನಾಟಕ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿ.ಎಂ.ಡಬ್ಲ್ಯೂ:69: ಸಿಎಲ್.ಎಂ. 2001 ದಿನಾಂಕ:21.11.2001ರಲ್ಲಿ ಪ್ರತ್ಯಾಯೋಜಿಸಿರುವ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ನೇ ಕಲಂ ಪ್ರಕಾರ ಶ್ರೀ ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ, ಮಧುಗಿರಿ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಅನ್ಸರ್ ಪಾಷಾ ಕಾರ್ಯದರ್ಶಿ ಇವರ ಹೆಸರಿನಲ್ಲಿ, ಇವರ ತಂದೆ ಲೇಟ್ ಅಬ್ದುಲ್ ಘನ್ನಿಸಾಬ್, ತಾಯಿ ಲೇಟ್ ನೂರೂನ್ನಿಸಾ ಹಾಗೂ ಜಂಟಿಯಾಗಿ ಸಹೋದರರ ಹೆಸರಿನಲ್ಲಿರುವ ಮತ್ತು ಅಬ್ದುಲ್ ರಫೀಕ್ ನಗದು ಗುಮಾಸ್ತರವರ ತಂದೆ ದಸ್ತಗಿರಿಸಾಬ್ ಹೆಸರಿನಲ್ಲಿರುವ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಲ್ಲಿ ವಿಚಾರಣೆಗಾಗಿ ಇರುವ ದಾವೆಗಳ ಅಂತಿಮ ತೀರ್ಪಿಗೆ ಒಳಪಟ್ಟು ಈ ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

ಶ್ರೀ ಅನ್ಸರ್ ಪಾಷಾ ಕಾರ್ಯದರ್ಶಿ ಇವರ ಹೆಸರಿನಲ್ಲಿ ಇವರ ತಂದೆ, ಇವರ ತಾಯಿ ಹಾಗೂ ಜಂಟಿಯಲ್ಲಿ ಸಹೋದರರ ಹೆಸರಿನಲ್ಲಿರುವ ಮತ್ತು ಅಬ್ದುಲ್ ರಫೀಕ್ ನಗದು ಗುಮಾಸ್ತರವರ ತಂದೆ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತುಗಳಿಗೆ ತತ್ಸಮಾನವಾದ ನಗದು ಭದ್ರತೆ ನೀಡುವ ವರೆವಿಗೆ ವಿಲೇವಾರಿ ಮಾಡುವುದೇ ಆಗಲಿ, ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದೇ ಆಗಲಿ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷಿಸಿ ಮಾರಾಟ ಮಾಡಿದರೂ ಈ ಸ್ವತ್ತುಗಳನ್ನು ಸಾರ್ವಜನಿಕರು ಖರೀದಿಸಿದಲ್ಲಿ, ಪರಭಾರೆ ಮಾಡಿಕೊಂಡಲ್ಲಿ ಅಥವಾ ಇನ್ನಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಾದುವಾಗುವುದಿಲ್ಲ (ಸಕ್ರಮವಾಗುವುದಿಲ್ಲ) ಎಂದು ಈ ಮೂಲಕ ಸಾರ್ವಜನಿಕ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರು ಮತ್ತು ಕಾನೂನು ವಾರಸುದಾರರು ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಗಳ ಮೌಲ್ಯಕ್ಕೆ ತಕ್ಕಷ್ಟು ಮತ್ತು ಈ ನ್ಯಾಯಾಲಯವು ಸರಿ ಎಂದು ಭಾವಿಸುವ ತಕ್ಕಷ್ಟು ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ, ಮಧುಗಿರಿ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಮಧುಗಿರಿ ಶಾಖೆ, ಮಧುಗಿರಿ ಈ ಬ್ಯಾಂಕಿನಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ:29.02.2008ರಂದು ಅಥವಾ ಅದಕ್ಕಿಂತ ಮುಂಚಿತವಾಗಿ ಈ ನ್ಯಾಯಾಲಯಕ್ಕೆ ಹಾಜರುಪಡಿಸುವುದರ ಮೂಲಕ ಈ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯಗಳ ಎದುರು ಅರ್ಜಿದಾರರು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೆ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರದ ಸಹಿ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ:24.01.2008ರಂದು ನೀಡಿದ್ದೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪ–ವಿಭಾಗ, ಮಧುಗಿರಿ.

ಷೆಡ್ಯೂಲ್ ಸ್ವತ್ತುಗಳು

| ಕ್ರ. ಸಂ. | ಖಾತೆದಾರರ/ ಹಕ್ಕುದಾರರ ಹೆಸರು ಮತ್ತು ವಿಳಾಸ | ಖಾತೆ ನಂ./ ಅಸೆಸ್‌ಮೆಂಟ್ ನಂ. | ಸರ್ವೆ ನಂ. | ವಿಸ್ತೀರ್ಣ ಎ.ಗುಂ. | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1. | 1. ಅನ್ಸರ್ ಪಾಷ ಬಿನ್ ಲೇ: ಅಬ್ದುಲ್ ಘನಿಸಾಬ್<br>2. ಅನ್ವರ್ ಬಿನ್ ಲೇ: ಅಬ್ದುಲ್ ಘನಿಸಾಬ್<br>3. ಮುನಾವರ್ ಬಿನ್ ಲೇ: ಅಬ್ದುಲ್ ಘನಿಸಾಬ್.<br>4. ಮುಕ್ತಾರ್ ಅಹಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>5. ನಿಸಾರ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>6. ನಯಾಜ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>7. ಶಬ್ಬೀರ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>8. ಅಬ್ದುಲ್ ಖಾದರ್ ಬಿನ್ ಲೇ: ಅಬ್ದುಲ್ ಘನಿಸಾಬ್ | 428 | 147/1 ಹಿರಿಯೂರು ತಾ: ಜೆ.ಜಿ. ಹಳ್ಳಿ | 3–37 | ಖುಷ್ಕಿ | ಪೂರ್ವ: ಸುವರ್ಣ ಮುಖಿ ನದಿ<br>ಪಶ್ಚಿಮ: ಪಟೇಲ್ ಹನುಮಂತಪ್ಪನವರ ಜಮೀನು<br>ಉತ್ತರ: ನೂರುನ್ನೀಸಾ ರವರ ಜಮೀನು<br>ದಕ್ಷಿಣ: ರೀ ಸರ್ವೆ ನಂ.146 ಮುಸ್ತಾಕ್ ಅಹಮದ್ ರವರ ಜಮೀನು. |
| 2. | 1. ಅನ್ಸರ್ ಪಾಷ ಬಿನ್ ಲೇ: ಅಬ್ದುಲ್ ಘನಿಸಾಬ್<br>2. ಅನ್ವರ್ ಬಿನ್ ಲೇ: ಅಬ್ದುಲ್ ಘನಿಸಾಬ್<br>3. ಮುನಾವರ್ ಬಿನ್ ಲೇ: ಅಬ್ದುಲ್ ಘನಿಸಾಬ್.<br>4. ಮುಕ್ತಾಕ ಅಹಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>5. ನಿಸಾರ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>6. ನಯಾಜ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>7. ಶಬ್ಬೀರ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>8. ಅಬ್ದುಲ್ ಖಾದರ್ ಬಿನ್ ಲೇ: ಅಬ್ದುಲ್ ಘನಿಸಾಬ್ | 428 | 142/2 ಹಿರಿಯೂರು ತಾ: ಜೆ.ಜಿ. ಹಳ್ಳಿ | 2–05 | ಖುಷ್ಕಿ | ಪೂರ್ವ: ಸುವರ್ಣ ಮುಖಿ ನದಿ<br>ಪಶ್ಚಿಮ: ಪಟೇಲ್ ಹನುಮಂತಪ್ಪನವರ ಜಮೀನು<br>ಉತ್ತರ: ಅಶ್ವಕ್ ಅಹ್ಮದ್ ರವರ ಜಮೀನು<br>ದಕ್ಷಿಣ: ರೀ ಸರ್ವೆ ನಂ.147/1ರ ಅಬ್ದುಲ್ ಘನಿರವರ ಜಮೀನು. |
| 3. | 1. ಅನ್ಸರ್ ಪಾಷ ಬಿನ್ ಲೇ: ಅಬ್ದುಲ್ ಘನಿಸಾಬ್<br>2. ಅಬ್ದುಲ್ ಜಬ್ಬರ್ ಯಾನೆ ಅನ್ವರ್ ಬಿನ್ ಲೇ: ಅಬ್ದುಲ್ ಘನಿಸಾಬ್<br>3. ಮಹಮದ್ ಮುನಾವರ್ ಬಿನ್ ಲೇ: ಅಬ್ದುಲ್ ಘನಿಸಾಬ್.<br>4. ಮುಕ್ತಾರ್ ಅಹಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>5. ಅಬ್ದುಲ್ ಗಫೂರ್ ಯಾನೆ ನಿಸಾರ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>6. ಅಬ್ದುಲ್ ಖಯ್ಯಾಂ ಯಾನೆ ನಯಾಜ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್<br>7. ಶಬ್ಬೀರ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್ | 428 | 209/ಪಿ6 ಹಿರಿಯೂರು ತಾ: ಜೆ.ಜಿ. ಹಳ್ಳಿ | 2–00 | ಖುಷ್ಕಿ | ಪೂರ್ವ: ಮೌಜನ್ ಇಶಾಕ್ ರವರ ಜಮೀನು<br>ಪಶ್ಚಿಮ: ಗೊಲ್ಲರಹಟ್ಟಿ ರಸ್ತೆ<br>ಉತ್ತರ: ಕೆರೆ ಕಾಲುವೆ ಹಾಗೂ ಪಿ.ಎಸ್. ಪಾರ್ಥಣ್ಣನವರ ಜಮೀನು<br>ದಕ್ಷಿಣ: ಎನ್.ಹೆಚ್–4 ರಸ್ತೆ |

| ಕ್ರ. ಸಂ. | ಖಾತೆದಾರರ/ ಹಕ್ಕುದಾರರ ಹೆಸರು ಮತ್ತು ವಿಳಾಸ | ಖಾತೆ ನಂ./ ಅಸೆಸ್‌ಮೆಂಟ್ ನಂ. | ಸರ್ವೆ ನಂ. | ವಿಸ್ತೀರ್ಣ ಎ.ಗುಂ. | ತರಹೆ | ಚೆಕ್ಕುಬಂದಿ |
|---|---|---|---|---|---|---|
| 4. | ಈ ಮೇಲಿನ 7 ಜನರು, (ಸಹೋದರರ ಜಂಟಿ ಹೆಸರಿನಲ್ಲಿರುವುವು) | 428 | 209/ಪಿ8 ಹಿರಿಯೂರು ತಾ: ಜೆ.ಜಿ. ಹಳ್ಳಿ | 1–00 | ಖುಷ್ಕಿ | ಪೂರ್ವ: ಮೌಜನ್ ಇಶಾಕ್ ರವರ ಜಮೀನು ಪಶ್ಚಿಮ: ಗೊಲ್ಲರಹಟ್ಟಿ ರಸ್ತೆ ಉತ್ತರ: ಕೆರೆ ಕಾಲುವೆ ಹಾಗೂ ಪಿ.ಎಸ್. ಪಾರ್ಥಣ್ಣನವರ ಜಮೀನು ದಕ್ಷಿಣ: ಎನ್.ಹೆಚ್–4 ರಸ್ತೆ |
| 5. | ಲೇ: ಅಬ್ದುಲ್ ಘನ್ನಿಸಾಬ್ ಬಿನ್ ಅಬ್ದುಲ್ ಕರೀಂಸಾಬ್ (ತಂದೆ ಹೆಸರಿನಲ್ಲಿರುವುದು) | 2038/1842/ 1736 | – | 58x34.7 ಅಡಿ | ಕಡಪ ಕಲ್ಲು ಮನೆ ಎ.ಸಿ. ಶೀಟ್ ಮಹಡಿ | ಪೂರ್ವ: ರಸ್ತೆ ಪಶ್ಚಿಮ: ಗಲ್ಲಿ ಉತ್ತರ: ಮುನ್ಸಿಪಲ್ ರಸ್ತೆ ದಕ್ಷಿಣ: ರೆಹಮಾನ್ ಸಾಬ್ ರವರ ಮನೆ |
| 6. | ನೂರುನ್ನಿಸಾ ಕೋಂ ಅಬ್ದುಲ್ ಘನಿ ಗರಿಮಾರನ ಹಟೀ, ಕೋಟೆ ಶಿರಾ, (ತಾಯಿ ಹೆಸರಿನಲ್ಲಿರುವುದು) | 2029/1829/ 1223 | – | 30x90 ಅಡಿ | ಎ.ಸಿ. ಶೀಟ್ ಕಟ್ಟಡ | ಪೂರ್ವ: ರೆಹಮಾನ್ ಖಾನ್ ರವರ ಮನೆ ಪಶ್ಚಿಮ: ರಸ್ತೆ ಉತ್ತರ: ರಸ್ತೆ ದಕ್ಷಿಣ: ಗಲ್ಲಿ |
| 7. | ದಸ್ತಗಿರಿಸಾಬ್ ಬಿನ್ ಕರೀಂಸಾಬ್ ಸಂಕಾಪುರ ಗ್ರಾಮ ಗೌಡಗೆರೆ ಹೋಬಳಿ ಶಿರಾ ತಾ: | 30 | 7/8ಪಿ | 4.00 | ಖುಷ್ಕಿ | ಅರ್ಜಿದಾರರ ಸಂಘದಲ್ಲಿ ವಿವರವಿದ್ದಂತೆ |

ದಿನಾಂಕ:24.01.2008 ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಸ್ಥಳ: ಮಧುಗಿರಿ ಮಧುಗಿರಿ ಉಪ–ವಿಭಾಗ, ಮಧುಗಿರಿ.

**ಇವರಿಗೆ:**

1) ಅನ್ವರ್ ಪಾಷಾ ಬಿನ್ ಅಬ್ದುಲ್ ಘನಿಸಾಬ್, ಕಾರ್ಯದರ್ಶಿ, ಸಲಾಮತ್ ಪತ್ತಿನ ಸಹಕಾರ ಸಂಘ ನಿ., ಶಿರಾ, ತುಮಕೂರು ಜಿಲ್ಲೆ.

2) ಅಬ್ದುಲ್ ರಫೀಖ್ ಬಿನ್ ದಸ್ತಗಿರಿ ಸಾಬ್, ನಗದು ಗುಮಾಸ್ತರು (ಮಾಜಿ) ಸಲಾಮತ್ ಪತ್ತಿನ ಸಹಕಾರ ಸಂಘ ನಿ., ಶಿರಾ, ತುಮಕೂರು ಜಿಲ್ಲೆ.

3) ಅನ್ವರ್ ಬಿನ್ ಲೇ: ಅಬ್ದುಲ್ ಘನಿ ಸಾಬ್, ಶಿರಾ ಟೌನ್, ತುಮಕೂರು ಜಿಲ್ಲೆ.

4) ಮುನಾವರ್ ಬಿನ್ ಲೇ: ಅಬ್ದುಲ್ ಘನಿಸಾಬ್.

5) ಮುಕ್ತಾರ್ ಅಹಮದ್ ಬಿನ್ ಲೇ: ಅಬ್ದುಲ್ ಘನಿಸಾಬ್

6) ನಿಸಾರ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್

7) ನಯಾಜ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್

8) ಶಬ್ಬೀರ್ ಅಹ್ಮದ್ ಬಿನ್ ಲೇ: ಅಬ್ದುಲ್ ಘನಿಸಾಬ್

9) ಅಬ್ದುಲ್ ಖಾದರ್ ಬಿನ್ ಲೇ: ಅಬ್ದುಲ್ ಘನಿಸಾಬ್

10) ಲೇ: ಅಬ್ದುಲ್ ಘನಿಸಾಬ್ ಬಿನ್ ಅಬ್ದುಲ್ ಕರೀಂಸಾಬ್ (ವಾರಸುದಾರರು)

11) ನೂರಾನ್ನೀಸಾ ಕೋಂ ಅಬ್ದುಲ್ ಘನಿ, ಶಿರಾ ಟೌನ್ ವಾಸಿ (ವಾರಸುದಾರರು)

12) ದಸ್ತಗಿರಿ ಸಾಬ್ ಬಿನ್ ಕರೀಂ ಸಾಬ್, ಸಂಕಾಪುರ ಗ್ರಾಮ, ಗೌಡಗೆರೆ ಹೋಬಳಿ, ಶಿರಾ ತಾಲ್ಲೋಕು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್.152 ಮಧುಗಿರಿ ಉಪ–ವಿಭಾಗ, ಮಧುಗಿರಿ.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬಳ್ಳಾರಿ**

**ಪತ್ರಿಕಾ ಪ್ರಕಟಣೆ**

**ಸಂಖ್ಯೆ: ಬಿಸಿಎಂ/ ಕಾಪಶಿವೇ/ ಸಿಆರ್–21/ 2008–09, ದಿನಾಂಕ:2ನೇ ಜುಲೈ, 2008**

**ವಿಷಯ:** 2008–09ನೇ ಸಾಲಿಗೆ ಹಿಂದುಳಿದ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ ತರಬೇತಿಗಾಗಿ ಅರ್ಜಿ ಆಹ್ವಾನಿಸುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್/68/ ಎಸ್‌ಡಬ್ಲ್ಯೂಡಿ/89, ದಿನಾಂಕ:02.11.1990.

2) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ/ 150/ ಬಿಸಿಎ/94, ದಿನಾಂಕ:17.09.1994.

3) ಸರ್ಕಾರಿ ಆದೇಶ ಸಂಖ್ಯೆ: ಸಕಇ/ 446/ ಬಿಎಂಎಸ್/ 2005, ಬೆಂಗಳೂರು ದಿನಾಂಕ:01.12.2005.

4) ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ಟಿಪ್ಪಣಿ ಆದೇಶ ದಿನಾಂಕ:30.06.2008.

ಬಳ್ಳಾರಿ ಜಿಲ್ಲೆಯಲ್ಲಿರುವ ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಗೆ 2008–09ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ವತಿಯಿಂದ ತರಬೇತಿಯನ್ನು ನೀಡಲು ಅರ್ಜಿಯನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗೊಳಪಟ್ಟಿರಬೇಕು.

**ನಿಬಂಧನೆಗಳು:**

1) ಅಭ್ಯರ್ಥಿಯು ಬಳ್ಳಾರಿ ಜಿಲ್ಲೆಯವರಾಗಿರಬೇಕು.

2) ಸರ್ಕಾರಿ ಆದೇಶ ಸಂಖ್ಯೆ: ಸಕಇ/225/ ಬಿಸಿಎ/2000 ಬೆಂಗಳೂರು ದಿನಾಂಕ:30.03.2002ರ ಅನ್ವಯ ವಿದ್ಯಾರ್ಥಿಗಳು ಪ್ರವರ್ಗ–1, ಪ್ರವರ್ಗ–2(ಎ), ಪ್ರವರ್ಗ–3(ಎ) ಮತ್ತು ಪ್ರವರ್ಗ–3(ಬಿ)ಗೆ ಸೇರಿದವರಾಗಿರಬೇಕು.

3) ಸರ್ಕಾರಿ ಆದೇಶ ಸಂಖ್ಯೆ: ಸಕಇ/ 446/ ಬಿಎಂಎಸ್/ 2005 ಬೆಂಗಳೂರು ದಿನಾಂಕ:01.12.2005 ಆದೇಶದಲ್ಲಿ ಶೇಕಡಾವಾರು ಪ್ರವರ್ಗ–1ರಲ್ಲಿ 2 ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಉಳಿದ ವರ್ಗಗಳಲ್ಲಿ ನಿಯಮಾನುಸಾರ 8 ಅಭ್ಯರ್ಥಿಗಳು ಒಟ್ಟು 10 ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

4) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಅಡ್ವೋಕೇಟ್ ಆಗಿ ಕಾರ್ಯನಿರ್ವಹಿಸಲು ನಿಗದಿಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 2 ವರ್ಷಗಳ ಅವಧಿಯ ಒಳಗಿರುವವರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

5) ಕಾನೂನು ತರಬೇತಿಯನ್ನು 4 ವರ್ಷಗಳ ಅವಧಿಯಾಗಿದ್ದು, ಮಾಸಿಕ ರೂ.1000–00 ಗಳ ಶಿಷ್ಯ ವೇತನ ನೀಡಲಾಗುವುದು.

6) ಕಾನೂನು ತರಬೇತಿಯನ್ನು ಬಳ್ಳಾರಿ ಜಿಲ್ಲೆಯಿಂದ 10 ಅಭ್ಯರ್ಥಿಗಳಿಗೆ ಮಾತ್ರ ನೀಡಲಾಗುವುದು. 10 ಅಭ್ಯರ್ಥಿಗಳಲ್ಲಿ ಶೇಕಡಾ 33.33 ರಷ್ಟು ಮಹಿಳಾ ಅಭ್ಯರ್ಥಿಗಳನ್ನು ಸಹ ಆಯ್ಕೆ ಮಾಡಲಾಗುವುದು. 10 ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ವರ್ಗವಾರು ವಿವರ ಕೆಳಕಂಡಂತಿದೆ.

| | | | |
|---|---|---|---|
| 1. | ಪ್ರವರ್ಗ–1 | 15 ಶೇ. | 2 ಅಭ್ಯರ್ಥಿಗಳು |
| 2. | ಪ್ರವರ್ಗ–2(ಎ) | 53 ಶೇ. | 5 ಅಭ್ಯರ್ಥಿಗಳು |
| 3. | ಪ್ರವರ್ಗ–3(ಎ) | 15 ಶೇ. | 1 ಅಭ್ಯರ್ಥಿ |
| 4. | ಪ್ರವರ್ಗ–3(ಬಿ) | 17 ಶೇ. | 2 ಅಭ್ಯರ್ಥಿಗಳು |
| | **ಒಟ್ಟು** | | **10 ಅಭ್ಯರ್ಥಿಗಳು** |

7) ಅಭ್ಯರ್ಥಿಯ ಗರಿಷ್ಟ ವಯೋಮಿತಿಯು 30 ವರ್ಷದೊಳಗಿರಬೇಕು. ಹಾಗೂ ಪ್ರವರ್ಗ–1ರ ಅಭ್ಯರ್ಥಿಗಳಿಗೆ ಒಂದು ವರ್ಷ ರಿಯಾಯಿತಿ ಇರುತ್ತದೆ.

8) ತರಬೇತಿಯ ಅವಧಿಯ ಮಧ್ಯಭಾಗದಲ್ಲಿ ತರಬೇತಿಗೆ ಗೈರು ಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯವೇತನ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.

9) ಪ್ರವರ್ಗ–1ನ್ನು ಹೊರತುಪಡಿಸಿ ಇತರೆ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 15,000–00ಗಳ ವಾರ್ಷಿಕ ಆದಾಯದ ಮಿತಿಯನ್ನು ನಿಗದಿಪಡಿಸಲಾಗಿದೆ.

10) ಅಭ್ಯರ್ಥಿಯು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿರಬೇಕು.

11) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಸಮಿತಿಯ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ ಕನಿಷ್ಟ 20 ವರ್ಷಗಳ ವೃತ್ತಿಯಲ್ಲಿ ಅನುಭವ ವಕೀಲರ ಅಧೀನದಲ್ಲಿ ತರಬೇತಿ ಪಡೆಯುವುದು.

12) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ:05.08.2008.

13) ಅಪೂರ್ಣವಾದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಯನ್ನು ಯಾವುದೇ ಮುನ್ಸೂಚನೆ ಇಲ್ಲದೆ ತಿರಸ್ಕರಿಸಲಾಗುವುದು.

14) ಆಯ್ಕೆಯು ಅನುದಾನ ಲಭ್ಯತೆಯ ಷರತ್ತಿಗೊಳಪಟ್ಟಿರುತ್ತದೆ.

ಹೆಚ್ಚಿನ ವಿವರಗಳಿಗೆ ಹಾಗೂ ಅರ್ಜಿ ನಮೂನೆಯನ್ನು ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಡಿ.ಸಿ. ಆಫೀಸ್ ಕೌಂಪೌಂಡ್, ಬಳ್ಳಾರಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಇಲಾಖೆ, ಬಳ್ಳಾರಿ.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬಳ್ಳಾರಿ**

**ಪತ್ರಿಕಾ ಪ್ರಕಟಣೆ**

**ಸಂಖ್ಯೆ: ಬಿಸಿಎಂ/ ಕಾಪಶಿವೇ/ ಸಿಆರ್-22/ 2008-09, ದಿನಾಂಕ:2ನೇ ಜುಲೈ, 2008**

**ವಿಷಯ:** 2008-09ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ ತರಬೇತಿಗಾಗಿ ಅರ್ಜಿ ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ/ 149/ಬಿಇಟಿ/99, ದಿನಾಂಕ:02.09.1999.

2) ಸಕಇ/205/ಬಿಎಂಎಸ್/ 99 ದಿನಾಂಕ:09.10.1999.

3) ಎಸ್‌ಡಬ್ಲ್ಯೂಎಲ್/60/ಎಸ್‌ಡಬ್ಲ್ಯೂ/12/ ದಿನಾಂಕ:02.11.1999.

4) ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ಟಿಪ್ಪಣಿ ಆದೇಶ ದಿನಾಂಕ:30.06.2008.

ಬಳ್ಳಾರಿ ಜಿಲ್ಲೆಯಲ್ಲಿರುವ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಂದ 2008-09ನೇ ಸಾಲಿನಿಂದ ನಾಲ್ಕು ವರ್ಷಗಳ ಅವಧಿಯವರೆಗೆ ಈ ಇಲಾಖಾ ವತಿಯಿಂದ ತರಬೇತಿಯನ್ನು ನೀಡಲು ಅರ್ಜಿಯನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗೊಳಪಟ್ಟಿರಬೇಕು.

**ನಿಬಂಧನೆಗಳು:**

1) ಅಭ್ಯರ್ಥಿಯು ಬಳ್ಳಾರಿ ಜಿಲ್ಲೆಯವರಾಗಿರಬೇಕು.

2) ಅಭ್ಯರ್ಥಿಯು ಮತೀಯ ಅಲ್ಪಸಂಖ್ಯಾತರರಾಗಿರಬೇಕು. (ಮುಸ್ಲಿಂ, ಜೈನ್, ಕ್ರಿಶ್ಚಿಯನ್, ಸಿಖ್, ಬೌದ್ಧ ಪಾರ್ಸಿ ಹಾಗೂ ಆಂಗ್ಲೋ ಇಂಡಿಯನ್)

3) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಅಡ್ವೋಕೇಟ್ ಆಗಿ ಕಾರ್ಯ ನಿರ್ವಹಿಸಲು ನಿಗದಿಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 2 ವರ್ಷಗಳ ಅವಧಿಯೊಳಗೆ ಇರುವವರು ಮಾತ್ರ ಅರ್ಜಿಯನ್ನು ಸಲ್ಲಿಸಬಹುದು.

4) ಕಾನೂನು ತರಬೇತಿಯು 4 ವರ್ಷಗಳ ಅವಧಿಯಾಗಿದ್ದು, ಮಾಸಿಕ ರೂ.1000-00 ಗಳನ್ನು ಶಿಷ್ಯವೇತನ ನೀಡಲಾಗುವುದು.

5) ಅಭ್ಯರ್ಥಿಯ ಗರಿಷ್ಠ ವಯೋಮಿತಿ 30 ವರ್ಷದೊಳಗಿರಬೇಕು.

6) ತರಬೇತಿಯ ಅವಧಿಯ ಮಧ್ಯಭಾಗದಲ್ಲಿ ತರಬೇತಿಗೆ ಗೈರು ಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯವೇತನ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.

7) ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ:05.08.2008.

8) ಅಪೂರ್ಣವಾದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಯನ್ನು ಯಾವುದೇ ಮುನ್ಸೂಚನೆ ಇಲ್ಲದೇ ತಿರಸ್ಕರಿಸಲಾಗುವುದು.

9) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯವು ರೂ.15000-00ಕ್ಕೆ ಮೀರಿರಬಾರದು.

10) ಅಭ್ಯರ್ಥಿಯು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿರಬೇಕು.

11) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವೃತ್ತಿಯಲ್ಲಿ ಅನುಭವ ವಕೀಲರ ಅಧೀನದಲ್ಲಿ ತರಬೇತಿ ಪಡೆಯುವುದು.

12) ಆಯ್ಕೆಯು ಅನುದಾನ ಲಭ್ಯತೆ ಮೇಲೆ ಅವಲಂಬಿಸಿರುವುದರಿಂದ ಷರತ್ತಿಗೊಳಪಟ್ಟಿರುತ್ತದೆ.

ಹೆಚ್ಚಿನ ವಿವರಗಳಿಗೆ ಹಾಗೂ ಅರ್ಜಿ ನಮೂನೆಯನ್ನು ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಡಿ.ಸಿ. ಆಫೀಸ್ ಕೌಂಪೌಂಡ್, ಬಳ್ಳಾರಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಇಲಾಖೆ, ಬಳ್ಳಾರಿ.

ಪಿ.ಆರ್.785

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕ್ ಶಿವನಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಬಿ.ಎಂ. ಚೆನ್ನಾರೆಡ್ಡಿ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:616ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.21,731/- ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ. 94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟೀಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:616: 2007-08/ 1552-53/ ದಿನಾಂಕ:07.06.2007.

2) ಉಪ ನಿರ್ದೇಶಕರು, ರಾಮನಗರ ರವರ ಪತ್ರಸಂಖ್ಯೆ: 7295 ಗಭೂಇ: ಡಿಸಿಬಿ: ಕಗಗು:616: 2007-08, ದಿನಾಂಕ:22.12.2006.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು ಶಿವನಹಳ್ಳಿ ಗ್ರಾಮದ ಸರ್ವೆ ನಂ.154ರಲ್ಲಿ ಬಿ.ಎಂ. ಚೆನ್ನಾರೆಡ್ಡಿ ರವರಿಗೆ 0.20 ಎಕರೆಗೆ ದಿನಾಂಕ:07.01.2004 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಗಭೂಇ: ಡಿಸಿಬಿ: ಕಗಗು:616/1552/ ದಿನಾಂಕ:07.06.2007 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 06-07 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.21,731/-ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರಿಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಷಿ ಬಂದಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯೂ ಸ್ಪಂದಿಸುತ್ತಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:616 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಗಭೂಇ:ಡಿಸಿಬಿ: ಕಗಗು/616/ 2007-08/ 6298, ದಿನಾಂಕ:13ನೇ ಫೆಬ್ರವರಿ, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು ಶಿವನಹಳ್ಳಿ ಗ್ರಾಮದ ಸರ್ವೆ ನಂ.154 ರಲ್ಲಿ 0.20 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 616 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿ ಕೊಳ್ಳಲಾಗಿದೆ.

ಪಿ.ಆರ್.202 ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕ್ ಸಾಲಬನ್ನಿ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ: ಬಾಲಾಜಿ ಶ್ರೀನಿವಾಸನ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:676ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.1,07,412/- ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ. 94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟೀಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:676: 2007-08/ ದಿನಾಂಕ:07.06.2007.

2) ಉಪ ನಿರ್ದೇಶಕರು, ರಾಮನಗರ ರವರ ಪತ್ರಸಂಖ್ಯೆ: 10551 ಗಭೂಇ:ಡಿಸಿಬಿ: ಕಗಗು:676:2007-08, ದಿನಾಂಕ:18.10.2007.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು ಸಾಲಬನ್ನಿ ಗ್ರಾಮದ ಸರ್ವೆ ನಂ.18ರಲ್ಲಿ ಮೆ: ಬಾಲಾಜಿ ಶ್ರೀನಿವಾಸನ್ ರವರಿಗೆ 2.20 ಎಕರೆಗೆ ದಿನಾಂಕ:29.10.2004 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಗಭೂಇ: ಡಿಸಿಬಿ: ಕಗಗು:676/ ದಿನಾಂಕ:18.10.2007 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 06-07 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,07,412/-ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರಿಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ನಿಯಮ 6(1) ಹಾಗೂ ನಿಯಮ

39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ. ಹಾಗೂ ಗುತ್ತಿಗೆಯನ್ನು ನಿಷ್ಕ್ರಿಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಷಿ ಬಂದಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯೂ ಸ್ಪಂದಿಸುತ್ತಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:616 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಗಭೂಇ:ಡಿಸಿಬಿ: ಕಗಗು/676/ 2007-08/ 6361, ದಿನಾಂಕ:18ನೇ ಫೆಬ್ರವರಿ, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು ಸಾಲಬನ್ನಿ ಗ್ರಾಮದ ಸರ್ವೆ ನಂ.18 ರಲ್ಲಿ 2.20 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 676 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿ ಕೊಳ್ಳಲಾಗಿದೆ.

ಪಿ.ಆರ್.203 ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿಗಳು**

**ವಿಷಯ:** ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಬುಕ್ಕಸಾಗರ ಗ್ರಾಮದಲ್ಲಿ ಗ್ರೇ ಗ್ರಾನೈಟ್‌ಗಾಗಿ ಮೆ: ಎಂ.ಎಂ. ಗ್ರಾನೈಟ್ಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 206ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ. 94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟೀಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:206: 2003-04:522, ದಿನಾಂಕ:11.04.2003.

2) ಉಪ ನಿರ್ದೇಶಕರು, ಹೊಸಪೇಟೆ ರವರ ಪತ್ರಸಂಖ್ಯೆ: ಗಭೂಇ: ಉನಿಹೊ: ಕಗಗು:ಡಿಸಿಬಿ:2002-03: ದಿನಾಂಕ:02.01.2003.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಬುಕ್ಕಸಾಗರ ಗ್ರಾಮದ ಸರ್ವೆ ನಂ.240ರಲ್ಲಿ ಮೆ: ಎಂ.ಎಂ. ಗ್ರಾನೈಟ್ಸ್ ರವರಿಗೆ 5-00 ಎಕರೆಗೆ ದಿನಾಂಕ:28.08.1998 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 206: ದಿನಾಂಕ:01.04.2003ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಲಾಗಿತ್ತು. 2007 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.9,94,909/-ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ ಹಾಗೂ ಗುತ್ತಿಗೆ ನಿಷ್ಕ್ರೀಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯೂ ಸ್ಪಂದಿಸುತ್ತಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:206 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಗಭೂಇ: ಕಗಗು/206/ 2007-08/ 15787, ದಿನಾಂಕ:28ನೇ ಮಾರ್ಚ್, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39ರಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಬುಕ್ಕಸಾಗರ ಗ್ರಾಮದಲ್ಲಿ ಗ್ರಾಮದ ಸರ್ವೆ ನಂ.240ರಲ್ಲಿ 5-00 ಎಕರೆಗೆ ಗ್ರೇ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:206ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.398 ನಿರ್ದೇಶಕರು.

**ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರ ಅಧಿಕಾರಿ, ಮಂಡ್ಯ**

**ಡಿ.ಇ.ನಂ.5–2007**

ಕರ್ನಾಟಕ ಸರ್ಕಾರ **ವಿರುದ್ಧ** ಜಿ. ಕುಮಾರ,
ಬೆರಳಚ್ಚುಗಾರರು, ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ (ಹಿ.ವಿ) ಮದ್ದೂರು, ವಾಸ: ಮನೆ ನಂ.712, 1ನೇ ಕ್ರಾಸ್, ಹಳೆ ಅಂಚೆ ಕಛೇರಿ ರಸ್ತೆ, ಗುತ್ತಲು ಕಾಲೋನಿ, ಮಂಡ್ಯ.

**ಪ್ರಕಟಣೆ**

ನೀವು ದಿನಾಂಕ:01.01.2007 ರಿಂದ ಈ ತಹಲ್‌ವರೆವಿಗೂ ನಿಮ್ಮ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ. ಈ ಬಗ್ಗೆ ಇಲಾಖಾ ತನಿಖೆ ನಡೆಸಲು ಅಪರ ಸಿವಿಲ್ ನ್ಯಾಯಾಧೀಶರು (ಹಿ.ವಿ.) ಮತ್ತು ಸಿ.ಜೆ.ಎಂ. ಮಂಡ್ಯ ರವರನ್ನು ತನಿಖಾಧಿಕಾರಿಯನ್ನಾಗಿ ನೇಮಿಸಿ, ನಿಮ್ಮ ವಿರುದ್ಧ ಇರುವ ಆರೋಪವನ್ನು ತನಿಖೆ ಮಾಡಲು ಆದೇಶಿಸಲಾಗಿತ್ತು. ಅದರಂತೆ ಅವರು ನಿಮ್ಮ ಮೇಲೆ ಮಾಡಿರುವ ಆರೋಪ ಸಾಬೀತಾಗಿದೆಯೆಂದು ವರದಿಯನ್ನು ದಿನಾಂಕ:18.06.2008ರಂದು ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರದ ಅಧಿಕಾರಿ ಮಂಡ್ಯರವರಿಗೆ ಸಲ್ಲಿಸಿರುತ್ತಾರೆ. ಆದುದರಿಂದ ತನಿಖಾಧಿಕಾರಿಯವರು ನೀಡಿರುವ ವರದಿಯನ್ನು ಏಕೆ ಒಪ್ಪಿಕೊಳ್ಳಬಾರದೆಂದು ಮತ್ತು ನಿಮ್ಮ ವಿರುದ್ಧ ಕರ್ನಾಟಕ ಸೇವಾ (ಸಿಸಿಎ) 8ರ ಪ್ರಕಾರ ಏಕೆ ತೀವ್ರ ದಂಡನೆ ಸಹಿತ ಯಾವುದೇ ದಂಡನೆ ಕ್ರಮ ಜರುಗಿಸಬಾರದು ಎಂಬುದಕ್ಕೆ ಈ ಪ್ರಕಟಣೆ ಪ್ರಕಟಗೊಂಡ 10 ದಿವಸಗಳೊಳಗಾಗಿ ಶಿಸ್ತು ಪ್ರಾಧಿಕಾರದ ಮುಂದೆ ಹಾಜರಾಗಿ ನಿಮ್ಮ ಸಮಜಾಯಿಸಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸುವುದು. ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ ಅಂತಿಮ ಆದೇಶ ಜಾರಿಗೊಳಿಸಲಾಗುವುದು.

**ಎಂ.ಜಿ. ಸುಧೀಂದ್ರ**
ಪ್ರಧಾನ ಜಿಲ್ಲಾ ನ್ಯಾಯಾಧೀಶರು ಮತ್ತು
ಶಿಸ್ತು ಪ್ರಾಧಿಕಾರ ಅಧಿಕಾರಿ, ಮಂಡ್ಯ.

**ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರ ಅಧಿಕಾರಿ, ಮಂಡ್ಯ**

**ಡಿ.ಇ.ನಂ.10–2007**

ಕರ್ನಾಟಕ ಸರ್ಕಾರ **ವಿರುದ್ಧ** ಜಿ. ಕುಮಾರ,
ಬೆರಳಚ್ಚುಗಾರರು, ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ (ಹಿ.ವಿ) ಮದ್ದೂರು,
ವಾಸ: ಮನೆ ನಂ.712, 1ನೇ ಕ್ರಾಸ್, ಹಳೆ ಅಂಚೆ ಕಛೇರಿ ರಸ್ತೆ, ಗುತ್ತಲು ಕಾಲೋನಿ, ಮಂಡ್ಯ.

**ಪ್ರಕಟಣೆ**

ನೀವು ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಾವಳಿಗಳು 1966 ನಿಯಮ 21(4) (1) (0) 23(3ಎ) ಗಳನ್ನು ಉಲ್ಲಂಘಿಸಿ ಹಲವಾರು ವ್ಯಕ್ತಿಗಳಿಂದ ಸಾಲ ಪಡೆದಿದ್ದು, ಈ ವಿಚಾರದಲ್ಲಿ ನಿಮ್ಮ ವಿರುದ್ಧ ಇಲಾಖಾ ತನಿಖೆ ನಡೆಸಲು ಅಪರ ಸಿವಿಲ್ ನ್ಯಾಯಾಧೀಶರು (ಹಿವಿ) ಸಿ.ಜೆ.ಎಂ. ಮಂಡ್ಯ ರವರನ್ನು ತನಿಖಾಧಿಕಾರಿಯನ್ನಾಗಿ ನೇಮಿಸಿ, ನಿಮ್ಮ ವಿರುದ್ಧ ಇರುವ ಆರೋಪಗಳನ್ನು ತನಿಖೆ ಮಾಡಲು ಆದೇಶಿಸಲಾಗಿತ್ತು. ಅದರಂತೆ ಅವರು ನಿಮ್ಮ ಮೇಲೆ ಮಾಡಿರುವ ಆರೋಪ ಸಾಬೀತಾಗಿದೆಯೆಂದು ವರದಿಯನ್ನು ದಿನಾಂಕ:18.06.2008 ರಂದು ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರದ ಅಧಿಕಾರಿ ಮಂಡ್ಯ ರವರಿಗೆ ಸಲ್ಲಿಸಿರುತ್ತಾರೆ. ಆದುದರಿಂದ ತನಿಖಾಧಿಕಾರಿಯವರು ನೀಡಿರುವ ವರದಿಯನ್ನು ಏಕೆ ಒಪ್ಪಿಕೊಳ್ಳಬಾರದೆಂದು ಮತ್ತು ನಿಮ್ಮ ವಿರುದ್ಧ ಕರ್ನಾಟಕ ಸೇವಾ (ಸಿಸಿಎ) ನಿಯಮಾವಳಿ 8ರ ಪ್ರಕಾರ ಏಕೆ ತೀವ್ರ ದಂಡನೆ ಸಹಿತ ಯಾವುದೇ ದಂಡನೆ ಕ್ರಮ ಜರುಗಿಸಬಾರದು ಎಂಬುದಕ್ಕೆ ಈ ಪ್ರಕಟಣೆ ಪ್ರಕಟಗೊಂಡ 10 ದಿವಸಗಳೊಳಗಾಗಿ ಶಿಸ್ತು ಪ್ರಾಧಿಕಾರದ ಮುಂದೆ ಹಾಜರಾಗಿ ನಿಮ್ಮ ಸಮಜಾಯಿಸಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸುವುದು, ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ ಅಂತಿಮ ಆದೇಶ ಜಾರಿಗೊಳಿಸಲಾಗುವುದು.

**ಎಂ.ಜಿ. ಸುಧೀಂದ್ರ**
ಪ್ರಧಾನ ಜಿಲ್ಲಾ ನ್ಯಾಯಾಧೀಶರು ಮತ್ತು
ಶಿಸ್ತು ಪ್ರಾಧಿಕಾರ ಅಧಿಕಾರಿ, ಮಂಡ್ಯ.

ಪಿ.ಆರ್.739

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/ 26/ಚುನಾವ/ 2005, ಬೆಂಗಳೂರು, ದಿನಾಂಕ:20/24ನೇ ಜೂನ್, 2008**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11ರ ಉಪಪ್ರಕರಣ (1) (viii)ರ ಪ್ರಕಾರ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಕೃಮಾಇ/26/ಚುನಾವ/2005, ದಿನಾಂಕ:07.01.2006ರಲ್ಲಿ ಹುಬ್ಬಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗದಗ ಇವರನ್ನು ಇಲಾಖಾ ಪ್ರತಿನಿಧಿಯನ್ನಾಗಿ ನೇಮಿಸಲಾಗಿರುತ್ತದೆ. ಪ್ರಸ್ತುತ ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಅಧಿಸೂಚನೆಯನ್ನು ರದ್ದುಗೊಳಿಸುತ್ತಾ, ಮೇಲ್ಕಂಡ ಕಾಯ್ದೆಯ ಕಲಂ 11(1) (viii) ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಹೆಚ್.ಆರ್. ಶ್ರೀನಿವಾಸ ಆದ ನಾನು, ಹುಬ್ಬಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ಪ್ರತಿನಿಧಿ ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿ |
|---|---|---|---|
| 1. | ಧಾರವಾಡ | ಹುಬ್ಬಳ್ಳಿ | ಕಾರ್ಯದರ್ಶಿ,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿಜಾಪುರ. |

**ಹೆಚ್.ಆರ್. ಶ್ರೀನಿವಾಸ**

ಪಿ.ಆರ್.714 ನಿರ್ದೇಶಕರು.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/ 19/ನಿಯವಿ/ 2008, ಬೆಂಗಳೂರು, ದಿನಾಂಕ:23/24ನೇ ಜೂನ್, 2008**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27)ರ ಪ್ರಕರಣ 145ರ ಉಪ ಪ್ರಕರಣ (2)(ಎ) ನ್ನು ಓದಿ ಪ್ರಕರಣ 6ರ ಉಪ ಪ್ರಕರಣ (2)ರ ಮೇರೆಗೆ ಸಿಂಧನೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರವಾದ ಸಿಂಧನೂರು ತಾಲ್ಲೂಕಿನಲ್ಲಿ ಅಧಿಸೂಚಿಸಲ್ಪಟ್ಟ ಕೃಷಿ ಉತ್ಪನ್ನ ಮಾರಾಟ ನಿಯಂತ್ರಣಕ್ಕಾಗಿ ಸಿಂಧನೂರು ಪಟ್ಟಣ ಪರಿಮಿತಿಯೊಳಗಿನ ಪ್ರದೇಶವನ್ನು ಮಾರುಕಟ್ಟೆ ಎಂದು ಮತ್ತು ಅನುಸೂಚಿ–ಅ ದಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು "ಮಾರುಕಟ್ಟೆ ಪ್ರಾಂಗಣ" ವೆಂದು ಅಧಿಸೂಚನೆ ಸಂಖ್ಯೆ: ಕೃಮಾಇ/18/ನಿಯವಿ/90 (1), ದಿನಾಂಕ:10.09.1993 ರಲ್ಲಿ ಕೃಷಿ ಮಾರಾಟ ನಿರ್ದೇಶಕರು ಘೋಷಿಸಿರುತ್ತಾರೆ.

ಮಾರುಕಟ್ಟೆ ಪ್ರಾಂಗಣದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕೆ ವ್ಯವಸ್ಥೆಗೊಳಿಸಿದ್ದು, ಜಾನುವಾರು ವಹಿವಾಟು ನಡೆಯುವ ಸಂದರ್ಭದಲ್ಲಿ ಸಾರ್ವಜನಿಕರಿಗೆ, ವಾಹನ ಸಂಚಾರಕ್ಕೆ ಅನಾನುಕೂಲತೆಗಳು ಉಂಟಾಗುತ್ತಿರುವ ಕಾರಣದಿಂದ ಸದರಿ ಜಾನುವಾರು ವಹಿವಾಟನ್ನು ಸ್ಥಳೀಯ ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ (ನಿ) ಇವರಿಗೆ ಸೇರಿದ ರಿ.ಸ.ನಂ.959 ರಲ್ಲಿನ 3 ಎಕರೆ 20 ಗುಂಟೆ ಜಮೀನಿನಲ್ಲಿ ನಡೆಸಲು ಉದ್ದೇಶಿಸಿ ಪ್ರಸ್ತುತ ಮಾರುಕಟ್ಟೆ ಪ್ರಾಂಗಣದಲ್ಲಿ ನಡೆಯುತ್ತಿರುವ ಜಾನುವಾರು ವಹಿವಾಟನ್ನು ಅಪವರ್ಜಿಸಿ ಸದರಿ ಜಾಗದಲ್ಲಿ ಜಾನುವಾರು ವಹಿವಾಟು ವ್ಯವಸ್ಥೆಗೊಳಿಸಲು ಮಾರುಕಟ್ಟೆ ಉಪ ಪ್ರಾಂಗಣ ಘೋಷಣೆಗೆ ಮಾರುಕಟ್ಟೆ ಸಮಿತಿಯು ಪ್ರಸ್ತಾಪಿಸಿರುವುದನ್ನು ಪರಿಗಣಿಸಿ ಕಾಯ್ದೆ ಕಲಂ 6(3)ರ ಮೇರೆಗೆ ಈ ಕೆಳಗಿನ ಅನುಸೂಚಿಯಲ್ಲಿ ನಿಗದಿಪಡಿಸಿದ ಸ್ಥಳವನ್ನು "ಮಾರುಕಟ್ಟೆ ಉಪ ಪ್ರಾಂಗಣ" ವೆಂದು ಘೋಷಿಸುವ ಉದ್ದೇಶವನ್ನು ಅಧಿಸೂಚನೆ ಸಂಖ್ಯೆ: ಕೃಮಾಇ/ 19/ನಿಯವಿ/2008, ದಿನಾಂಕ:24.03.2008ರ ಮೂಲಕ ಪ್ರಕಟಿಸಿ ಕನ್ನಡಪ್ರಭ ದಿನಪತ್ರಿಕೆ ದಿನಾಂಕ:02.04.2008ರಲ್ಲಿ ಮತ್ತು ಕರ್ನಾಟಕ ರಾಜ್ಯಪತ್ರದಲ್ಲಿ ದಿನಾಂಕ:15.05.2008ರಲ್ಲಿ ಪ್ರಕಟಿಸಿ ಆಕ್ಷೇಪಣೆ ಮತ್ತು ಸಲಹೆಗಳನ್ನು 31 ದಿನದೊಳಗಾಗಿ ಕೃಷಿ ಮಾರಾಟ ಇಲಾಖೆ ನಿರ್ದೇಶಕರಿಗೆ ಕಳುಹಿಸಿಕೊಡಬಹುದೆಂದು ಸೂಚನೆ ನೀಡಲಾಗಿತ್ತು. ಈ ಸಂಬಂಧ ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಸ್ವೀಕೃತವಾಗಿರುವುದಿಲ್ಲ.

ಆದುದರಿಂದ ಈಗ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಪ್ರಕರಣ 3ನ್ನು ಓದಿ ಪ್ರಕರಣ 6(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಹೆಚ್.ಆರ್. ಶ್ರೀನಿವಾಸ ಆದ ನಾನು ಸಿಂಧನೂರು ಮಾರುಕಟ್ಟೆ ಪ್ರಾಂಗಣದಲ್ಲಿ ಅಧಿಸೂಚಿಸಿರುವ

ಜಾನುವಾರು ವಹಿವಾಟು ನಡೆಯುವ ಸಂದರ್ಭದಲ್ಲಿ ಸಾರ್ವಜನಿಕರಿಗೆ ವಾಹನ ಸಂಚಾರಕ್ಕೆ ಅನಾನುಕೂಲತೆಗಳು ಉಂಟಾಗುತ್ತಿರುವ ಕಾರಣದಿಂದ ಸದರಿ ಜಾನುವಾರು ವಹಿವಾಟನ್ನು ಅಪವರ್ಜಿಸಿ ಸ್ಥಳೀಯ ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ಇವರಿಗೆ ಸೇರಿದ ರಿಜಿಸ್ಟರ್ ಸರ್ವೆ ನಂ.959 ರಲ್ಲಿನ 3 ಎಕರೆ 20 ಗುಂಟೆ ಜಮೀನಿನಲ್ಲಿ ಜಾನುವಾರು ವಹಿವಾಟಿಗೆ ಅನುಸೂಚಿಯಲ್ಲಿ ನಿಗದಿಪಡಿಸಿದ ಸ್ಥಳವನ್ನು "ಮಾರುಕಟ್ಟೆ ಉಪ ಪ್ರಾಂಗಣ" ವೆಂದು ಈ ಮೂಲಕ ಘೋಷಿಸಿದ್ದೇನೆ.

**ಅನುಸೂಚಿ**

ಸಿಂಧನೂರು ನಗರಸಭೆ ವ್ಯಾಪ್ತಿಯಲ್ಲಿ ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಸಿಂಧನೂರು ಇವರಿಗೆ ಸೇರಿದ ರಿ.ಸ.ನಂ.959 ರಲ್ಲಿನ 3 ಎಕರೆ 20 ಗುಂಟೆ ಜಮೀನಿನ ಈ ಕೆಳಗಿನ ಸೀಮಾಬದ್ಧ ಸ್ಥಳ:

ಪೂರ್ವ: ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ ಇದರ ಉಳಿದ ಜಾಗ ಮತ್ತು ರಸ್ತೆ.

ಪಶ್ಚಿಮ: ರಾಜ್ಯ ಉಗ್ರಾಣ ನಿಗಮದ ಗೋದಾಮುಗಳು

ಉತ್ತರ: ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ ಇದರ ಉಳಿದ ಜಾಗ ಮತ್ತು ಕಟ್ಟಡಗಳು.

ದಕ್ಷಿಣ: ಸಿಂಧನೂರು ಕುಷ್ಟಗಿ ರಾಜ್ಯ ಹೆದ್ದಾರಿ.

**ಹೆಚ್.ಆರ್. ಶ್ರೀನಿವಾಸ**
ನಿರ್ದೇಶಕರು.

ಪಿ.ಆರ್.742

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿ**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು ಹೇರಂದಪ್ಪನಹಳ್ಳಿ, ಗ್ರಾಮದ ಸರ್ವೆ ನಂ.299ರಲ್ಲಿ 0.20 ಎಕರೆಗೆ ಕಪ್ಪು ಶಿಲೆಗಾಗಿ ಶ್ರೀ ಸಿಂಗಯ್ಯ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 554 ರ ಗುತ್ತಿಗೆಯನ್ನು ಪುನರ್ ಸ್ಥಾಪಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರಸಂಖ್ಯೆ: ಸಿಐ-33: ಎಂಎಂಎನ್-2005: ಬೆಂಗಳೂರು ದಿನಾಂಕ:20.05.2008.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು ಹೇರಂದಪ್ಪನ ಹಳ್ಳಿ ಗ್ರಾಮದ ಸರ್ವೆ ನಂ.299 ರಲ್ಲಿ 0.20 ಎಕರೆ ವಿಸ್ತೀರ್ಣದಲ್ಲಿ ಕಪ್ಪು ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 554 ರ ಗುತ್ತಿಗೆಯನ್ನು ಶ್ರೀ ಸಿಂಗಯ್ಯ ರವರ ಹೆಸರಿನಲ್ಲಿ ದಿನಾಂಕ:23.10.2002 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ:20.12.2004 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಗಭೂಇ: ಕಗಗು/554/ 2008-09/ 4191, ದಿನಾಂಕ:12ನೇ ಜೂನ್, 2008**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:20.05.2008ರಲ್ಲಿ ನಿರ್ದೇಶಿಸಿರುವಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಹೇರಂದಪ್ಪನ ಹಳ್ಳಿ ಗ್ರಾಮದ ಸರ್ವೆ ನಂ.299 ರಲ್ಲಿ 0.20 ಎಕರೆ ವಿಸ್ತೀರ್ಣದಲ್ಲಿ ಕಪ್ಪು ಶಿಲೆಗಾಗಿಕಲ್ಲು ಗಣಿ ಗುತ್ತಿಗೆ ಸಂಖ್ಯೆ:554ರ ಗುತ್ತಿಗೆಯನ್ನು ಶ್ರೀ ಸಿಂಗಯ್ಯ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:554 ಗುತ್ತಿಗೆಯನ್ನು ಗುತ್ತಿಗೆ ರದ್ದುಗೊಳಿಸಿದ ದಿನಾಂಕ:20.12.2004 ರಿಂದ ಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ಪಿ.ಆರ್.664 ನಿರ್ದೇಶಕರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಬೆಂಗಳೂರು ರವರ ನಡವಳಿ**

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಕ್ಯಾದಿಗುಪ್ಪ ಗ್ರಾಮದಲ್ಲಿ ಪಿಂಕ್ ಗ್ರಾನೈಟ್‌ಗಾಗಿ ಶ್ರೀಮತಿ ಸುನಿತಾ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:254ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1) ಕ.ಉ.ಖ.ರಿ.ನಿ.94ರ ನಿಯಮ 6(1) ಮತ್ತು ನಿಯಮ 39ರಡಿ ಈ ಕಛೇರಿಯಿಂದ ಜಾರಿಯಾದ ನೋಟಿಸ್ ಸಂಖ್ಯೆ: ಗಭೂಇ: ಡಿಸಿಬಿ: ಕಗಗು:254: 2008–09:4074 ದಿನಾಂಕ:19.10.2007.

2) ಹಿರಿಯ ಭೂ ವಿಜ್ಞಾನಿ, ಕೊಪ್ಪಳ ರವರ ಪತ್ರ ಸಂಖ್ಯೆ: ಗಭೂಇ: ಹಿಭೂವಿ: ಕೊಖವಿ:ಕಗಗು: 254: 2008–09: 1627 ದಿನಾಂಕ:23.07.2007.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಠಗಿ ತಾಲ್ಲೂಕು, ಕ್ಯಾದಿಗುಪ್ಪ ಗ್ರಾಮದ ಸರ್ವೆ ನಂ.16/1 ರಲ್ಲಿ ಶ್ರೀಮತಿ ಸುನಿತಾ ರವರಿಗೆ 3–00 ಎಕರೆಗೆ ದಿನಾಂಕ:13.08.1999 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಅಂತಿಮ ನೋಟೀಸು ಸಂಖ್ಯೆ: ಡಿಸಿಬಿ: ಕಗಗು:254 ದಿನಾಂಕ:19.10.2007ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2006–07 ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,42,392/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಹಾಗೂ ಗಣಿಗಾರಿಕೆ ಕೈಗೊಳ್ಳದೆ ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ನಿಷ್ಕ್ರೀಯವಾಗಿ ಇಟ್ಟ ಬಗ್ಗೆ ಸಮಜಾಯಿಸಿ ಕೇಳಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಹಾಗೂ ನಿಯಮ 39ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ ಹಾಗೂ ಗುತ್ತಿಗೆ ನಿಷ್ಕ್ರೀಯವಾಗಿರುವುದರಿಂದ ಈ ಬಗ್ಗೆ ಸಮಜಾಯಿಸಿ ಬಂದಿರುವುದಿಲ್ಲ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಗುತ್ತಿಗೆದಾರರು ಯಾವ ರೀತಿಯು ಸ್ಪಂದಿಸಿರುವುದಿಲ್ಲವಾದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂ.ಆರ್.ಸಿ.92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ:254 ರಡಿ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಸಂಖ್ಯೆ: ಗಭೂಇ:ಕಗಗು/254/ 2008–09/ 1472, ದಿನಾಂಕ:12ನೇ ಮೇ, 2008**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು ನಿಯಮ 39ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಕ್ಯಾದಿಗುಪ್ಪ ಗ್ರಾಮದ ಸರ್ವೆ ನಂ.16/1ರಲ್ಲಿ 3–00 ಎಕರೆಗೆ ಪಿಂಕ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:254ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿ.ಆರ್.540 ನಿರ್ದೇಶಕರು.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003-Clarification under Section 59(4) regarding the rate of tax applicable on 2.5 Sq.cables (1100 volts) (which is used as part of submersible pumpsets) control panel boards used for 5 HP, 7.5HP submersible pumpsets and motor winding wire which is used as part of submersible pumpsets.

**Ref:** Application Dated:07.07.2008 of M/s Standard Water Pumps Pvt.Ltd., No.40/1, Patalamma Temple Street, Basavanagudi, Bangalore-560 004.

In its application cited above, M/s Standard Water Pumps Pvt.Ltd., No.40/1, Patalamma Temple Street, Basavanagudi, Bangalore-560 004 has sought clarification regarding the rate of tax applicable on 2.5 Sq.cables (1100 volts) (which is used as part of submersible pumpsets) control panel boards used for 5 HP, 7.5HP submersible pumpsets and motor winding wire which is used as part of submersible pumpsets.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of

revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.250/06-07, Dated:26th July, 2008**

It is hereby clarified that the rates of tax applicable in the following goods are as under:

| Sl. No. | Commodity | Rate of tax/ Section |
|---|---|---|
| 1. | Control Panel Boards (CET Code 8536.50.10) | Taxable at 4% as per sl.no.195 in notification No.FD 197 CSL 2005(6), dated:30.04.2005. |
| 2. | Submersible Motor Winding Wires (PVC or polymer insulated) | Taxable at 4% as parts of submersible pump sets under sl.no.21 of Third Schedule to the Karnataka Value Added Tax Act, 2003. |
| 3. | PVC flat cables for submersible pumpsets | Taxable at 4% as parts of submersible pump sets under sl.no.21 of Third Schedule to the Karnataka Value Added Tax Act, 2003. |

**B.A. HARISH GOWDA**

PR-923

Commissioner of Commercial Taxes, (Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on "Honeycomb partition frames".

**Ref:** Application Dated:26.04.2008 of Sri B.M. Rakshit, Partner M/s Honeycomb Associates, No.45/16, Gubbanna Industrial Estate, 6th Block, Rajajinagar, Bangalore-560 010.

In his application cited above, Sri B.M. Rakshit, Partner M/s Honeycomb Associates, No.45/16, Gubbanna Industrial Estate, 6th Block, Rajajinagar, Bangalore-560 010 has sought clarification regarding the rate of tax applicable on "Honeycomb partition frames".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.22/08-09, Dated:11th July, 2008**

It is hereby clarified that "Honeycomb partition frames" are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

PR-875

Commissioner of Commercial Taxes, (Karnataka), Bangalore.

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ–ಕೊಡಗು ಜಿಲ್ಲೆ

## ಪ್ರಕಟಣೆ

**ವಿಷಯ:** ಆಡಳಿತ ನ್ಯಾಯಾಧೀಕರಣ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಕಾನೂನು ಪದವೀಧರರಿಗೆ ತರಬೇತಿಗಾಗಿ ಅರ್ಜಿಯನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್:68/ ಎಸ್‌ಇಡಬ್ಲ್ಯೂ89/ ಬೆಂಗಳೂರು, ದಿನಾಂಕ:02.11.1990.

2) ಸರ್ಕಾರಿ ಆದೇಶ ಸಂಖ್ಯೆ: ಕಂಇ 511 ಬಿಎಂಎಂ 2004, ಬೆಂಗಳೂರು, ದಿನಾಂಕ:04.01.2005.

3) ಸರ್ಕಾರಿ ಆದೇಶ ಸಂಖ್ಯೆ: ಸಕಇ:349/ ಪಕವಿ/ 2005, ಬೆಂಗಳೂರು, ದಿನಾಂಕ:28.01.2006.

2008–09ನೇ ಸಾಲಿಗೆ ಕೊಡಗು ಜಿಲ್ಲೆಯ ವ್ಯಾಪ್ತಿಯಲ್ಲಿನ ತಾಲ್ಲೂಕುಗಳಿಂದ ಆಡಳಿತ ನ್ಯಾಯಾಧೀಕರಣ ಯೋಜನೆಯಡಿ ತರಬೇತಿ ನೀಡಲು ಪರಿಶಿಷ್ಟ ಜಾತಿಯ ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ಇಚ್ಛೆಯುಳ್ಳ ಅಭ್ಯರ್ಥಿಯು ಈ ಕೆಳಕಂಡ ಷರತ್ತುಗಳನ್ವಯ ಅರ್ಜಿಯನ್ನು ಈ ಕಛೇರಿಯಿಂದ ಪಡೆದು ದಿನಾಂಕ:15.07.2008 ರೊಳಗಾಗಿ ಸಲ್ಲಿಸಬಹುದಾಗಿದೆ.

### ಷರತ್ತುಗಳು

1) ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಯು ಕೊಡಗು ಜಿಲ್ಲೆಯವರಾಗಿರಬೇಕು.

2) ಅಭ್ಯರ್ಥಿಗಳು 36 ವಯೋಮಿತಿಯೊಳಗಿರಬೇಕು.

3) ಅರ್ಜಿ ಸಲ್ಲಿಸಲು ಕೊನೆಯ ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಮೊದಲು 2 ವರ್ಷಗಳ ಒಳಗಡೆ ಕಾನೂನು ಪದವಿ ಪಡೆದಿರಬೇಕು.

4) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪ್ರಾಸಿಕ್ಯೂಟ್ ಬಳಿ ಅಥವಾ 20 ವರ್ಷಕ್ಕಿಂತ ಹೆಚ್ಚಿನ ಅನುಭವ ಹೊಂದಿರುವ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ತರಬೇತಿಯನ್ನು ಪೂರ್ಣಗೊಳಿಸದೆ ಬಿಟ್ಟು ಹೋಗಬಾರದು. ರಾಜ್ಯ ಅಥವಾ ಕೇಂದ್ರ ಸರ್ಕಾರಿ ನೌಕರಿ ಸಿಕ್ಕಿದ್ದಲ್ಲಿ ಮಾತ್ರ ನಿಯಮಾನುಸಾರ ಸಡಿಲಗೊಳಿಸಲಾಗುವುದು. ಒಂದು ವೇಳೆ ತರಬೇತಿ ಬಿಟ್ಟು ಹೋದಲ್ಲಿ ಅಂತವರ ಶಿಷ್ಯ ವೇತನವನ್ನು ನಿಯಮಾನುಸಾರ ವಸೂಲಿ ಮಾಡಲಾಗುವುದು.

6) ತರಬೇತಿ ಅವಧಿಯು 4 ವರ್ಷಗಳಾಗಿದ್ದು ಮಾಸಿಕ ರೂ.1000–00 ಗಳ ಶಿಷ್ಯವೇತನವನ್ನು ನೀಡಲಾಗುವುದು.

7) ಸುಳ್ಳು ಮಾಹಿತಿ ದಾಖಲಾತಿಗಳನ್ನು ಒದಗಿಸಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನಿನ ಪ್ರಕಾರ ಶಿಕ್ಷೆಗೆ ಗುರಿ ಪಡಿಸಲಾಗುವುದು. ಅಂತಹ ಅಭ್ಯರ್ಥಿಗಳಿಂದ ತರಬೇತಿ ಅವಧಿಯಲ್ಲಿ ನೀಡಿದ ಶಿಷ್ಯವೇತನವನ್ನು ಶೇ.10ರ ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು.

8) ಅರ್ಜಿಯಲ್ಲಿ ಪೂರ್ಣ ಮಾಹಿತಿ ಇಲ್ಲದಿದ್ದ ಪಕ್ಷದಲ್ಲಿ ಅರ್ಜಿ ಅಪೂರ್ಣವಾಗಿದ್ದಲ್ಲಿ ಅಂತಹ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

9) ಅಭ್ಯರ್ಥಿಯು ಕಾನೂನು ಪದವಿಯಲ್ಲಿ ತೇರ್ಗಡೆ ಹೊಂದಿದ 2 ವರ್ಷದೊಳಗಾಗಿ ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೊಂದಾಯಿಸಿದ ನಂತರ ಶಿಷ್ಯವೇತನ ಮತ್ತು ಎನ್‌ರೋಲ್‌ಮೆಂಟ್ ಫೀಯನ್ನು ನೀಡತಕ್ಕದ್ದು.

10) ಸದಸ್ಯ ಕಾರ್ಯದರ್ಶಿಯು ಅಧ್ಯಕ್ಷರ ಪೂರ್ವಾನುಮತಿ ಪಡೆದು ಅಭ್ಯರ್ಥಿಯ ಶಿಷ್ಯವೇತನವನ್ನು ದೂರು ಬಂದಲ್ಲಿ ಅಥವಾ ಸುಳ್ಳು ಪ್ರಮಾಣ ಪತ್ರಗಳನ್ನು ನೀಡಿದ್ದಲ್ಲಿ ಮತ್ತು ತರಬೇತಿಗೆ ಮಾಹಿತಿ ನೀಡದೆ ಗೈರು ಹಾಜರಾಗಿದ್ದಲ್ಲಿ ತಡೆಯಬಹುದು. ಅಧ್ಯಕ್ಷರು ಈ ಬಗ್ಗೆ ಪರಿಶೀಲಿಸಿ ಅಭ್ಯರ್ಥಿಯ ಕಡೆಯಿಂದ ಯಾವುದೇ ಲೋಪವಿಲ್ಲವೆಂದು ಕಂಡುಬಂದಲ್ಲಿ ತಡೆ ಹಿಡಿದಿರುವ ಶಿಷ್ಯವೇತನವನ್ನು ಮರುಪಾವತಿಸಲು ಆದೇಶಿಸಬಹುದು.

11) ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.722

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

## ಪ್ರಕಟಣೆ

**ಸಂಖ್ಯೆ:ಬಿಸಿಎಂಉ: ಹಿವ: ಕಾಶಿವೇ:ಸಿಆರ್:19: 2008–09, ದಿನಾಂಕ:26ನೇ ಜೂನ್, 2008**

**ವಿಷಯ:** ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂ60:ಎಸ್‌ಇಡಬ್ಲ್ಯೂ89: ದಿನಾಂಕ:02.11.1990.

2) ಸರ್ಕಾರದ ಆದೇಶ ಸಂಖ್ಯೆ: ಸಕಇ:446: ಬಿಎಂಎಸ್:2005, ದಿನಾಂಕ:01.11.2005.

ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ವಕೀಲಿ ವೃತ್ತಿಯಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಜಿಲ್ಲೆಯ ಅರ್ಹ ಮತ್ತು ಆಸಕ್ತ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಲ್ಲಿ ಪಡೆಯಬಹುದು.

1) ಅರ್ಜಿ ಸಲ್ಲಿಸುವ ಕಾನೂನು ಪದವೀಧರರು ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ ಮತ್ತು 3ಬಿ ಗಳಿಗೆ ಸೇರಿದವರಾಗಿರಬೇಕು. ಪ್ರವರ್ಗ–1ನ್ನು ಹೊರತುಪಡಿಸಿ ಇತರೇ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಕುಟುಂಬದ ವಾರ್ಷಿಕ ಆದಾಯ ರೂ.15,000/–ಗಳ ಮಿತಿಯಲ್ಲಿರಬೇಕು.

2) ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಿಂದ ಹಿಂದಿನ ಎರಡು ವರ್ಷಗಳೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

3) ಹಿಂದುಳಿದ ವರ್ಗಗಳ ಪ್ರವರ್ಗ–2ಎ, 3ಎ ಮತ್ತು 3ಬಿ ಸೇರಿದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ 30 ವರ್ಷಗಳ ವಯೋಮಿತಿಯಲ್ಲಿರಬೇಕು. ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು ಗರಿಷ್ಠ 31 ವರ್ಷಗಳ ವಯೋಮಿತಿಯಲ್ಲಿರಬೇಕು.

4) ಅಭ್ಯರ್ಥಿಗಳು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೊಂದಾಯಿಸಿರಬೇಕು.

5) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ವಕೀಲಿ ವೃತ್ತಿಯಲ್ಲಿ ತರಬೇತಿ ಕೊಡಿಸಿ ನಾಲ್ಕು ವರ್ಷಗಳ ವರೆಗೆ ಮಾಹೆಯಾನ ರೂ.1000/– ಶಿಷ್ಯವೇತನ ನೀಡಲಾಗುವುದು.

6) ಆಸಕ್ತ ಅಭ್ಯರ್ಥಿಗಳು ನಿಗದಿತ ಅರ್ಜಿಯನ್ನು ಪಡೆದು ಸಂಪೂರ್ಣವಾಗಿ ಭರ್ತಿ ಮಾಡಿ ಕಾನೂನು ಪದವಿಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿಗಳ ದೃಢೀಕೃತ ಪ್ರತಿಗಳು, ಬಾರ್ ಕೌನ್ಸಿಲ್ ನೊಂದಾವಣೆ ಪತ್ರದ ಪ್ರತಿ ಮತ್ತು ಜಾತಿ, ಆದಾಯ ಪ್ರಮಾಣ ಪತ್ರಗಳನ್ನು ಲಗತ್ತಿಸಿ ಸಲ್ಲಿಸಬೇಕು.

7) ಅರ್ಜಿಗಳನ್ನು ಅವಶ್ಯವಿರುವ ಅಗತ್ಯ ದಾಖಲಾತಿಗಳೊಡನೆ ದಿನಾಂಕ:31.07.2008 ರೊಳಗೆ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು ಉಡುಪಿ ಇವರಿಗೆ ಸಲ್ಲಿಸಬೇಕು.

8) ನಿಗದಿತ ದಿನಾಂಕದ ನಂತರ ಬರುವ ಮತ್ತು ಅಪೂರ್ಣವಾದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ ಇವರನ್ನು ಸಂಪರ್ಕಿಸಬಹುದು. (ದೂರವಾಣಿ:0820–2531581)

ಜಿಲ್ಲಾ ಅಧಿಕಾರಿ,
ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ, ಉಡುಪಿ.

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ**

**ಪ್ರಕಟಣೆ**

**ಸಂಖ್ಯೆ:ಬಿಸಿಎಂಉ: ಅಸಂ: ಕಾಶಿವೇ:ಸಿಆರ್:20: 2008–09, ದಿನಾಂಕ:26ನೇ ಜೂನ್, 2008**

**ವಿಷಯ:** ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ವಕೀಲಿ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂ60:ಎಸ್‌ಇಡಬ್ಲ್ಯೂ89: ದಿನಾಂಕ:02.11.1990.

ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ (ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಕ್ಕರು) ಕಾನೂನು ಪದವೀಧರರಿಗೆ ವಕೀಲಿ ವೃತ್ತಿಯಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಜಿಲ್ಲೆಯ ಅರ್ಹ ಮತ್ತು ಆಸಕ್ತ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಲ್ಲಿ ಪಡೆಯಬಹುದು.

1) ಕಾನೂನು ಪದವೀಧರರು ಅಲ್ಪಸಂಖ್ಯಾತರ ಸಮುದಾಯಕ್ಕೆ (ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಕ್ಕರು) ಸೇರಿರಬೇಕು. ಮತ್ತು ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ.15,000/–ಗಳ ಮಿತಿಯಲ್ಲಿರಬೇಕು.

2) ಅಭ್ಯರ್ಥಿಯು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಹಿಂದಿನ ಎರಡು ವರ್ಷಗಳೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

3) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತನ್ನ ಹೆಸರನ್ನು ನೊಂದಾಯಿಸಿರಬೇಕು.

4) ಅಭ್ಯರ್ಥಿಯು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ 30 ವರ್ಷಗಳ ವಯೋಮಿತಿಯಲ್ಲಿರಬೇಕು.

5) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ವಕೀಲಿ ವೃತ್ತಿಯಲ್ಲಿ ನಾಲ್ಕು ವರ್ಷಗಳ ತರಬೇತಿ ನೀಡಿ ಮಾಹೆಯಾನ ರೂ.1000/– ಶಿಷ್ಯವೇತನ ಮಂಜೂರು ಮಾಡಲಾಗುವುದು.

6) ಆಸಕ್ತ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಪಡೆದು ಸಂಪೂರ್ಣವಾಗಿ ಭರ್ತಿ ಮಾಡಿ ಜಾತಿ ಮತ್ತು ಆದಾಯ ಪ್ರಮಾಣ ಪತ್ರ, ಕಾನೂನು ಪದವಿಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿಗಳ ದೃಢೀಕೃತ ಪ್ರತಿಗಳು ಹಾಗೂ ಬಾರ್ ಕೌನ್ಸಿಲ್ ನೊಂದಾವಣೆ ಪತ್ರದ ಪ್ರತಿಗಳನ್ನು ಲಗತ್ತಿಸಿ ಸಲ್ಲಿಸಬೇಕು.

7) ಅರ್ಜಿಗಳನ್ನು ಅವಶ್ಯವಿರುವ ಎಲ್ಲಾ ದಾಖಲೆಗಳೊಡನೆ ದಿನಾಂಕ:31.07.2008 ರೊಳಗೆ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು ಉಡುಪಿ ಇವರಿಗೆ ಸಲ್ಲಿಸಬೇಕು.

8) ಅಪೂರ್ಣವಾದ ಮತ್ತು ನಿಗದಿತ ದಿನಾಂಕದ ನಂತರ ಬರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ ಇವರನ್ನು ಸಂಪರ್ಕಿಸಬಹುದು. (ದೂರವಾಣಿ:0820–2531581)

ಜಿಲ್ಲಾ ಅಧಿಕಾರಿ,
ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ, ಉಡುಪಿ.

ಪಿ.ಆರ್.766

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003-Clarification under Section 59(4) regarding the rate of tax applicable on "Honeycomb partition frames".

**Ref:** Application Dated:26.04.2008 of Sri B.M. Rakshit, Partner M/s Honeycomb International Inc., No.45/16, Gubbanna Industrial Estate, 6th Block, Rajajinagar, Bangalore-560 010.

In his application cited above, Sri B.M. Rakshit, Partner M/s Honeycomb International Inc., No.45/16, Gubbanna Industrial Estate, 6th Block, Rajajinagar, Bangalore-560 010 has sought clarification regarding the rate of tax applicable on "Honeycomb partition frames".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.25/08-09, Dated:11th July, 2008**

It is hereby clarified that "Honeycomb partition frames" are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

PR-876